# ಕೊರವಂಜಿ

*Koravan*

ಜನವರಿ
೧೯೫೭



ಸಂಪಾದಕರು :
ಶ್ರೀ॥ ರಾ. ಶಿ.

ಬರಹಗಾರರು :

ಶ್ರೀ॥ ಪಾಪಿ
ಶ್ರೀ॥ ಪ್ರಸಾದ್
ಶ್ರೀ॥ ರಾಮಿ
ಶ್ರೀ॥ ಪಾಟೂಳಿ
ಶ್ರೀ॥ ಕೇಫ
ಶ್ರೀ॥ ಅ. ರಾ. ಸೇ.
ಶ್ರೀ॥ ಕಾಮತ್
ಶ್ರೀ॥ ಕುಂಜಾಲಿ
ಡಾ॥ ಖಾಸ್ಗಿ
ಶ್ರೀ॥ ಶ್ರೀಪತಿ
ಶ್ರೀ॥ ದಾಶರಥಿ ದೀಕ್ಷಿತ್

ಇತ್ಯಾದಿ, ಇತ್ಯಾದಿ.

ಬಿಡಿ ಪ್ರತಿ
ಕೇವಲ ನಾಲ್ಕ



# ಕಿರ್ಲೋಸರ್

## ಕಬ್ಬಿನ ಗಾಣಗಳು

ಘನತೆ ಮತ್ತು ಬಾಳಿಕೆಗೆ ದೇಶದಾದ್ಯಂತ
ಹೆಸರುಪಡೆದಿವೆ.

—: ಗಾಣಗಳ ವಿವರ :—

| | | | | |
|---|---|---|---|---|
| ಕರಾಮತ್ : | ಜೋಡೆತ್ತುಗಳಿಂದ ನಡೆಸಲ್ಪಡತಕ್ಕವು | | | |
| ಕಮಲ್ : | ೨ ಜೊತೆ ಎತ್ತುಗಳಿಂದ ,, | | | |
| ಕೋಯನಾ : | ೫ ಅಶ್ವಶಕ್ತಿ ಯಂತ್ರದಿಂದ ,, | | | |
| ಕರಾಮತ್ : | ೬-೮ | ,, | ,, | ,, |
| ಶರತ್ ನಂ. ೨ : | ೮-೧೦ | ,, | ,, | ,, |
| ವಸಂತ್ ನಂ. ೩ : | ೧೨-೧೪ | ,, | ,, | ,, |

ರೆಡಿ ಸ್ಟಾಕಿನಿಂದ ದೊರೆಯುತ್ತವೆ.

## ಕಿರ್ಲೋಸ್ಕರ್ ಬ್ರದರ್ಸ್ ಲಿ.,

ಶ್ರೀ ನರಸಿಂಹರಾಜ ರಸ್ತೆ

ಪೋಸ್ಟ್ ಬಾಕ್ಸ್ ೬೦೬ : : ಬೆಂಗಳೂರು ೨.





## ಮರಗೆಲಸಕ್ಕೆ ರಕ್ಷಣೆಯು ಅವಶ್ಯಕ

ಯಾವದೇ ಮರವಾಗಲಿ, ಮತ್ತು ಅದರ ಮೇಲ್ಮೈಯ ಪರಿಸ್ಥಿತಿ ಹ್ಯಾಗೂ ಇರಲಿ, ಅದು ಸವೆದು ಹೋಗದಂತೆಯೂ, ದೀರ್ಘಕಾಲ ಬಾಳುವಂತೆಯೂ, ತುಂಬಾ ಆಕರ್ಷಿಸುವಂತೆಯೂ ಮಾಡುವ ತಕ್ಕುದಾದ ಶಾಲಿಮಾರ್ ಪೆಯಿಂಟು ಇದೆ.





ಇದಕ್ಕೆ ಕಾರಣ, ಶಾಲಿಮಾರ್ ಪೆಯಿಂಟುಗಳಿಗೆ ಭಾರತದಲ್ಲಿ 55 ವರ್ಷಗಳಿಗಿಂತ ಮಿಗಿಲಾಗಿ ತಯಾರಿಕೆಯ ಅನುಭವದ ಬೆಂಬಲವಿದೆ. ಭಾರತದ ಕಠಿಣ ಮತ್ತು ತೀಕ್ಷ್ಣವಾದ ಹವಾಗುಣವನ್ನು ಇವುಗಳು ಎದುರಿಸಬಲ್ಲುವು ಎಂಬುದಕ್ಕೆ ಗ್ಯಾರಂಟಿ ಇವುಗಳ ತಯಾರಿಸುವಿಕೆಯಲ್ಲಿ ನಡೆಸಿದ ಬಹಳ ಸಂಶೋಧನೆ, ಕ್ರಮವಾದ ಸುಧಾರಣೆ ಮತ್ತು ಪ್ರಗತಿಯಾಗಿರುತ್ತದೆ.





**ಯಾವದೇ ಪೆಯಿಂಟಿನ ಅವಶ್ಯಕತೆ ಇರಲಿ,**
**ಯಾವ ಕೆಲಸಕ್ಕೆಂದು ಸ್ಪಷ್ಟವಾಗಿ ಹೇಳಿರಿ**

# ಶಾಲಿಮಾರ್
# ಪೆಯಿಂಟ್ ಪ್ರಾಡಕ್ಟ್ಸುಗಳು




ಎಲ್ಲಾ ತರದ ತಯಾರಿಕೆಗಳ ವಿವರಗಳನ್ನು ಕೊಡುವ 'ಶಾಲಿಮಾರ್ ರೆಡಿ ರೆಫರೆನ್ಸ್' ನೋಟಿಸುಬಗ್ಗೆ ಬರೆದುಕೊಳ್ಳಿರಿ.

I SPW 357




ಸಂಪುಟ ೧೭ ಜನವರಿ ೧೯೫೭ ಸಂಚಿಕೆ ೧೦

## — ಕ್ರಿಸ್‌ಮಸ್ ಪ್ರಾರ್ಥನೆ —

ಪ್ರೇಮದೂತ ಯೇಸುವಿನ ೧೯೫೭ನೆಯ ಹುಟ್ಟಿದ ಹಬ್ಬದಂದು ನವಕರ್ಣಾಟಕದ ಸೋದರ ಸೋದರಿಯರೆಲ್ಲರೂ, ಮೈಸೂರಿನ ರಾಜ್ಯದಲ್ಲಿ ಪ್ರೇಮ ಬಂಧನರಾಗಿ ಬಾಳಲೆಂದು ತಿಳಿಮನಸ್ಸಿನಿಂದ ದೇವನಲ್ಲಿ ಮೊರೆಯಿಡುತ್ತೇವೆ.

ಪ್ರೇಮ ಬಂಧನರಾಗಿ, ಭಾರತದ ನವ ಹದಿನಾಲ್ಕು ಸಂಸ್ಥಾನಗಳವರೂ **ಬಾಳಿ** ಬದುಕಲೆಂದು ಪ್ರಾರ್ಥಿಸುತ್ತೇವೆ.

ತದ್ರೀತಿ, ಖಂಡಗಳೆಂದು ಸಂಕುಚಿತ ಮಾನವನಿಂದ ಬೇರ್ಪಡಿಸಲ್ಪಟ್ಟಿದ್ದ ಭೂಲೋಕದ ಭಾಗಗಳೆಲ್ಲವೂ, ಅ-ಖಂಡವಾಗಿ, ಪ್ರೇಮ ಬಂಧನದಿಂದ ಒಂದಾಗಲೆಂದು ಅತಿ ದೈನ್ಯದಿಂದ ಬೇಡುತ್ತೇವೆ.

ಸಕಲ ಲೋಕಗಳು, ಸಮಸ್ತ ಚರಾಚರ ವಸ್ತುಗಳೂ, ಕಂಡುಬಂದ, **ಕಾಣದಿ**ರುವ ಸರ್ವವೆಲ್ಲವೂ ಪ್ರೇಮ ಬಂಧನದಿಂದ ಒಂದಾಗಲೆಂದು ಮನಸಾರೆ ಹಾರೈಸುತ್ತೇವೆ.

೧೯೫೭ ಕ್ರಿಸ್ತಶಕ, ೨೫೦೦ ಬುದ್ಧಶಕ, ೫೦೦೦ಕ್ಕೂ ಮಿಕ್ಕಿದ ಚೀಣೀಶಕ, ೬೦೦೦ಕ್ಕೂ ಮಿಗಿಲಾದ ಹಿಂದೂಶಕ, ಇವೆಲ್ಲದರ ತಿರುಳೂ ಇಷ್ಟೇ ಅಲ್ಲವೇ? **ಕಾಲಕ್ಕೆ** ತಕ್ಕ ಉಡಿಗೆ, ದೇಶಕ್ಕೆ ತಕ್ಕ ನಡತೆ, ಭಾವಕ್ಕೆ ತಕ್ಕ ಕುಣಿತ, **ಜೀವಕ್ಕೆ ಸಮನಾದ ಜೀವ,** ಇದೇ ಅಲ್ಲವೇ ಜೀವನದ, ಬಾಳಿನ, ರಹಸ್ಯ!!

—ನಮ್ಮ ಆಶಯವು, ಈಗರ್ಥವಾಗಿರಬಹುದಲ್ಲವೇ?—

ಪ್ರೇಮದೂತನ ಅಂಶ ಇಂದು ಲೋಕದಲ್ಲಿ ಪ್ರಖ್ಯಾತ **ಶಾಂತಿ ದೂತನಾಗಿರುವ** ರಹಸ್ಯ ಇದೇ ಇರಬೇಕಲ್ಲವೇ?

# ಕುಹಕಿಡಿಗಳು

ರೇಡಿಯೋ ಲೈಸೆನ್ಸ್ ಅನ್ನು ಸಕಾಲದಲ್ಲಿ ತೆಗೆದುಕೊಳ್ಳದಿದ್ದರಿಂದ ನಿಮಗೆ ಜುಲ್ಮಾನೆ ಹಾಕಿದೆ ಎಂದು ಬಂದ ನೋಟೀಸಿಗೆ, ಹೆಬ್ಬಿಗುಬ್ಬಾಲೆಯವರು "ನೀವು ಸಾರುವ ಶಾಸ್ತ್ರೀಯ ಸಂಗೀತದಲ್ಲಿ, ಮಧ್ಯೆ ಮಂತ್ರಿಗಳ ಭಾಷಣಕ್ಕಾಗಿ, ಕಾಲ ವ್ಯಯಿಸಿ ನಮ್ಮ ಕಿವಿ ಚುಚ್ಚುತ್ತಿಲ್ಲವೇ? ಅದೇ ರೀತಿ ನಾವು ನಿಮ್ಮ ಕಿಸೆಯನ್ನು ಕಾಲಾನಂತರ ತುಂಬುವುದರಲ್ಲಿ ತಪ್ಪೇನಿದೆ ಎಂದು ಶ್ರೀ ಕೇಸ್ಕರ್ ಅವರಿಗೆ ಬರೆದಿದ್ದಾರಂತೆ.

* * *

ಕ್ರಿಮಿಗಳ ಲೋಕದಲ್ಲಿ ರಾಜಕೀಯುವೇರ್ಪಟ್ಟ ಕಾರಣದಿಂದಲೇ, ಕ್ರಿಮಿನಾಶಕ ಔಷಧಿಗಳು ಕೀರ್ತಿವಂತರಾದುವು ಎನ್ನುವುದರಲ್ಲಿ ಸ್ವಲ್ಪವಾದರೂ ಸತ್ಯ ಇದ್ದೇ ಇರಬೇಕು!

* * *

ಚಿನ್ನದಗಣಿಗಳ ರಾಷ್ಟ್ರೀಕರಣವನ್ನು, ಮಾಡಿದಂತೆಯೇ, ಬೆಳ್ಳಿ ಗಣಿಗಳನ್ನೂ ರಾಷ್ಟ್ರೀಕರಣ ಮಾಡಬೇಕೆಂದೂ, ಅಲ್ಲಿಯೂ ಕಾರ್ಮಿಕರ ತಾಪತ್ರಯ ಇದೆಯೆಂದೂ ಆ ಗಣಿಯವರು ಕೇಳಿಕೊಂಡು, ಸನ್ನಾಹ ನಡೆಸುತ್ತಾರೆಂಬುದು ಖಚಿತವಲ್ಲವಂತೆ!

* * *

ಆತ್ಮಹತ್ಯೆ ಮಾಡಿಕೊಳ್ಳಲು ರಾಜರುಗಳ ಕಾಲದಲ್ಲಿ, ವಿಷ, ನೇಣು, ಕೆರೆ, ಬೆಂಕಿ ಎಂದನ್ನುತ್ತಿದ್ದರು.

—ಸಮತಾಸಮಾಜದ ಈ ದಿನಗಳಲ್ಲಿ ರೈಲು ಹತ್ತಿ ಅರಿಯಾಲೂರು ತರಹ ಸೇತುವೆ ಸೇರುತ್ತಾರೆ—ಜೈ! ಸಮತಾಸಮಾಜ್!!

* * *

ಮನಸ್ಸಿಗೆ ತುಂಬಾ ದುಃಖ ಬಂದಾಗ, ಅತಿ ಜೋರಾಗಿ ಹಾಡು ಹೇಳಿದರೆ ಒಳ್ಳೆಯದಂತೆ. (ವೈದ್ಯಕೀಯ ಸಲಹೆ)

—ಆಹಾ! ಈಗರ್ಥವಾಯಿತು ಸಂಗೀತಗಾರರ ಕೂಗಾಟ; ದುಃಖವನ್ನು ಹಂಚಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆಂಬುದು.

* * *

ಮಗನ ಕೈ ಎಲುಬು ಮುರಿದಾಗ, ಡಾಕ್ಟರು ಪ್ಲಾಸ್ಟರ್ ಆಫ್ ಪ್ಯಾರಿಸ್‌ನಲ್ಲಿ ಚಿಕಿತ್ಸೆ ಮಾಡುತ್ತೇನೆ ಎಂದಾಗ, ಸಿರಿವಂತ ಪಾರ್ಸಿ ಮಾತೆಯೊಬ್ಬಳು, ಪ್ಲಾಸ್ಟರ್ ಆಫ್ ವಾಷಿಂಗ್‌ಟನ್ ಹಾಕಿ ಎಂದುದು ನಿಜವಲ್ಲವಂತೆ!

* * *

# ಉರಿಗಾಳು

ಯಾವುದೋ ಒಂದು ಭಾರಿ ಕಚೇರಿಯಲ್ಲಿ ಅಡಿಗೆ ಪದಾರ್ಥಗಳೂ, ಕಾಯಿ ಪಲ್ಯಗಳೂ, ಪೂಜಾ ಸಾಮಗ್ರಿಗಳೂ, ದೊರೆಯುತ್ತವೆ, ಎಂದು ಬೋರ್ಡುಗಳನ್ನು ತಗುಲುಹಾಕಿದಾರಂತಲ್ಲಾ, ಎಂದೊಬ್ಬರು ನಮಗೆ ಪತ್ರ ಬರೆದಿದಾರೆ....ಕಚೇರಿಗಳಲ್ಲಿ ಆಫೀಸರುಗಳ ಹೆಸರುಗಳನ್ನು ಬೋರ್ಡುಗಳಲ್ಲಿ ಬರೆದು ತಗುಲಿಸಿರುತ್ತಾರೆ, ಅಷ್ಟೆ.... ಅಲ್ಲವೆ?

* * *

ಮಹಿಳೆಯರು 'ಹಾಸ್ಯ'ಪ್ರಿಯರು, ಎಂಬುದಕ್ಕೆ ಅವರು ತಮ್ಮ ಪತಿಗಳೊಂದಿಗೆ ಬಾಳುತ್ತಿರುವುದೇ ನಿದರ್ಶನ........ಹಾಸ್ಯಾಸ್ಪದ ಪುರುಷರ ಸಂಗಡ ಬಾಳಲು ಹಾಸ್ಯ ಪ್ರಿಯತೆ ಅತ್ಯವಶ್ಯಕ.

* * *

ವಿಧಾನಸಭಾ ಮಂದಿರದಲ್ಲಿ, ಸದಸ್ಯರು ನೀರು ಕುಡಿಯುವುದು ಸಭಾ ಗೌರವಕ್ಕೆ ತಕ್ಕುದಲ್ಲವೆಂದು ಅಧ್ಯಕ್ಷರು ಅಪ್ಪಣೆ ಕೊಡಿಸಿದರು. (ವರದಿ)....ನೀರು ಕುಡಿಸುವುದೇ ಅವರ ಕರ್ತವ್ಯ, ಎಂದು ವಿರೋಧ ಪಕ್ಷದವರೊಬ್ಬರು ಹೇಳಿಕೆ ಇತ್ತಿದಾರಂತೆ.

* * *

"ಯುವಕ ಸಮ್ಮೇಳನಕ್ಕೆ ಸಿದ್ಧತೆ"....ಎಂದರೆ, ಅಕ್ಕಪಕ್ಕದ ಬಂಗಲಿಯವರೆಲ್ಲ ಬೇರೆ ಊರಿಗೆ ಹೊರಟರು, ಎಂದೊ?

* * *

ಭಾರತಕ್ಕೆ ದೊಡ್ಡ ರಾಷ್ಟ್ರಗಳಿಂದ ಆಕ್ರಮಣ ನಡೆದೀತೆಂಬ ಭಯವಿಲ್ಲ ಎಂದು ನೆಹರು ಘೋಷಿಸಿರುವುದನ್ನು, ಪ್ರತಿಭಟಿಸಿ, 'ಹಾಗಾದರೆ, ನಾವೇನು, ಸಣ್ಣ ರಾಷ್ಟ್ರಗಳೆ?' ಎಂದು ಪಾಕಿಸ್ತಾನವೂ ಪೋರ್ಚುಗಲ್ ದೇಶವೂ ಕೋಪ ತಾಳಿದೆ ಯಂತೆ.

* * *

ಟಿಕೀಟ್ ಇಲ್ಲದೆ ನುಗ್ಗುವವರ ಸಂಖ್ಯೆಯನ್ನು ಕಡಿಮೆ ಮಾಡಲು ನಾವು ಇನ್ನೂ ಶಕ್ತರಾಗಿಲ್ಲ. (ಇಲಾಖಾ ವರದಿ)........ಚುನಾವಣಾ ಸಮಿತಿಗಳದೂ ಇದೇ ಗೋಳು.

* * *

ವಿಧಾನಸೌಧದ ಮಹಾಗೋಪುರದ ಎತ್ತರವನ್ನು ಹತ್ತಡಿಯಷ್ಟು ಇಳಿಸಲು ನಿಶ್ಚಯಿಸಿರುವುದು, ಖರ್ಚು ಕಡಿಮೆ ಮಾಡುವ ಉದ್ದೇಶದಿಂದಲ್ಲವಂತೆ...... ದೃಷ್ಟಿ ಪರಿಹಾರಕ್ಕಾಗಿ, ಅಂತೆ.

* * *

ವಿಧಾನಸಭಾ ಸದಸ್ಯರು ಕನ್ನಡ ಮಾತನಾಡುವಾಗ, ಪರಸ್ಪರ ಅರ್ಥವಾಗುವುದಿಲ್ಲ; ಆದಕಾರಣ, ರಾತ್ರಿ ಪಾಠಶಾಲೆಗಳನ್ನೇರ್ಪಡಿಸಿ, ಒಬ್ಬರ ಮಾತು ಒಬ್ಬರಿಗೆ ತಿಳಿಯುವಂತೆ ಮಾಡಲು ಸಲಹೆ ಬಂದಿದೆ ... ಹಲವರ ಮಾತಿಗ ಅರ್ಥ ತಿಳಿಯದಿರುವುದೇ ಮೇಲು, ಜಗಳ ಕಡಿಮೆಯಾಗುತ್ತದೆ, ಎಂದೊಬ್ಬರು ಅಭಿಪ್ರಾಯಪಡುತ್ತಾರೆ.

* * *

"ನಾವು ಭಾರತದವರು ಎಂಬ ಭಾವನೆ ಬೆಳೆಯಬೇಕು" (ಭಾಷಣ)....ಅಂದರೆ, ನಮ್ಮಲ್ಲಿ ಯಾರು ಕೌರವರು, ಯಾರು ಪಾಂಡವರು?

* * *

ನಿಜವನ್ನು ಹೇಳೋಣವೆಂದು ಹೊರಟಾಗಲೆಲ್ಲ, ಈ ಲಾಯರುಗಳು ಅಡ್ಡಿ ಬರುತ್ತಿದಾರೆ, ಎಂದು ಸಾಕ್ಷಿಗಾರನೊಬ್ಬ ಜಡ್ಜಿಗೆ ಕಾಗದ ಬರೆದಿದಾನಂತೆ.

* * *

ಹೊಸರಾಜ್ಯ ಸ್ಥಾಪನೆಯಾಗಿ ೫೦ ದಿನ ಕಳೆದುಹೋಯಿತು; ಆದರೂ ಇನ್ನೂ ಕಚೇರಿಗಳ ವ್ಯವಸ್ಥೆಯೇ ಸರಿಯಾಗಿಲ್ಲ, ಎಂದು ಸದಸ್ಯರೊಬ್ಬರು ಟೀಕಿಸಿದರು ....... ಈಗಿರುವ ಅವ್ಯವಸ್ಥೆಯೇ ತಮಗೆ ತುಂಬ ಅನುಕೂಲ, ಎಂದು ಅನೇಕ ಆಫೀಸರುಗಳು ಹೇಳುತ್ತಿದಾರೆ.

* * *

ಉಮೇದುವಾರ ಯಾವ ಜಾತಿಯವನು, ಎಂಬುದನ್ನು ಗಮನಿಸಿ ಆತ ತಮ್ಮ ಜಾತಿಯವನಾದರೆ ಮಾತ್ರ ಆತನಿಗೆ ವೋಟು ನೀಡುವುದು, ಎಂಬ ಪದ್ಧತಿ ಹೋಗಬೇಕು, ಎಂದು ಕೋರಲಾಗಿದೆ....ಇದರಿಂದಾಗಿ, ವೋಟರು ಮಹಾಶಯರು ಆತನ ಉಪಜಾತಿ ಯಾವುದು, ಆತ ತಮ್ಮ ಉಪಜಾತಿಯವನೋ, ಎಂಬ ಜಿಜ್ಞಾಸೆಗೆ ತೊಡಗುವುದು ಖಂಡಿತವಂತೆ.

* * *

ಪಾಟ್ನಾದ ಮುಸ್ಲಿಂ ವಕೀಲರೊಬ್ಬರು ಹಿಂದೂ ಮಹಾಸಭೆಗೆ ಅದರ ರಾಜಕೀಯ ವಿಭಾಗದ—ಸದಸ್ಯರಾಗಿ ಸೇರಿದರಂತೆ........ಇದರ ಪಾಕಿಸ್ತಾನ್ ವರದಿಯನ್ನು ಮೊನ್ನೆ ನಾವೋದಿದೆವು: "ಲಕ್ಷಾಂತರ ಮುಸ್ಲಿಮರನ್ನು ಭಾರತದಲ್ಲಿ ಹಿಂದೂ ಮತಕ್ಕೆ ಸೇರಲು ಬಲವಂತಪಡಿಸುತ್ತಲಾಗಿದೆ" ಎಂಬುದೇ ಆ ವರದಿ.

* * *

ಶಿಕ್ಷಣ ಶಿಬಿರದ ಉದ್ದೇಶ, ಯೋಗ್ಯರಾದ ಉದ್ಯೋಗರಹಿತ ವಿದ್ಯಾವಂತರನ್ನು ತಯಾರುಮಾಡುವುದೇ ಆಗಿದೆ. (ವರದಿ)....ಅಂದರೆ, ಈಗ ನಮ್ಮ ವಿಶ್ವವಿದ್ಯಾಲಯಗಳು ತಯಾರುಮಾಡುವ ಉದ್ಯೋಗರಹಿತ ವಿದ್ಯಾವಂತರು ಯೋಗ್ಯರಲ್ಲವೇನು?

# ಪುರಾಣಿ ಕಥೆಗಳು

## ೧. ಮಾಯವಾಗುವ ಟೋಪಿ!

"ಸಿಡಿಮುಖಿ" ಪತ್ರಿಕೆಯ ಸಂಪಾದಕರು, ಒಂದಾನೊಂದು ಸಂಜೆ ತಮ್ಮ ಕೊಠಡಿಯಲ್ಲಿ ಕುಳಿತಿದ್ದಾರೆ. ಕಚೇರಿಯ ಜವಾನ, ಹಾಗೂ ಮುದ್ರಣಕಾರ, ಅಲ್ಲದೆ, ಸೋದರಳಿಯ ಇಷ್ಟೂ ಆದವ "ಶ್ರೀ ಪಂಚಶೀಲ್-ಹೈಕ್-ಲೀ ರವರು" ಕಾಣಲು ಬಂದಿದ್ದಾರೆ ಎಂದು ತಿಳಿಸಿದ್ದಾನೆ. ಚೀಣಾ, ಭಾರತ, ಅಮೇರಿಕಾದ; ಮಧುರ ಮೈತ್ರಿತ್ವದ ಹೆಸರನ್ನಿಟ್ಟುಕೊಂಡ ಈತ ಟಿಬೆಟ್ಟಿನ ಅವತಾರ ಪುರುಷರ ಅನುಗ್ರಹ ಪಡೆದ ಹಿರಿಯುವನೇ ಇರಬೇಕು ಎಂದುಕೊಂಡು ಸಂಪಾದಕರು ಬರಮಾಡಿಕೊಂಡರು.

ಆತ ಅಲ್ಲೇ ಪೇರಿಸಿಟ್ಟಿದ್ದ ಪತ್ರಿಕಾ ಸಂಚಿಕೆಗಳ ಬೆಂಚಿನ ಮೇಲೇ ಕೂತುಕೊಂಡ.

ಸಂಪಾದಕರು: ಮಹಾಸ್ವಾಮಿ! ತಾವು ನಮ್ಮನ್ನು ಈ ರೀತಿ ಭೇಟಿಕೊಟ್ಟು ಗೌರವಿಸಿದುದಕ್ಕೆ ಕಾರಣವೇನು? ಅಲ್ಪನಾದ ನನ್ನಿಂದ ಏನು ಸೇವೆ ಸಾಧ್ಯ! ಎಂದರು.

ಆತ "ಮಹಾದೇವರೇ! ಬಲು ದಿನದಿಂದ ನನ್ನ ಛಾಯಾ ಚಿತ್ರ ನಿಮ್ಮ ಪತ್ರಿಕೆಯಲ್ಲಿ ಬರಬೇಕೆಂಬ ಹಂಬಲವಿದೆ. ಅದು ಸಾಧ್ಯವಾದರೆ, ಆಗ ನನ್ನ ಹೆಂಡತಿಯು ನನ್ನನ್ನು ಹೊಸ ಕಾನೂನಿನ ಪ್ರಕಾರ ಬಿಟ್ಟುಕೊಡಲು ಒಪ್ಪಿದ್ದಾಳೆ. "ಅಲ್ಲಾ ಅಂದ್ರೆ! ಕೈಹಿಡಿದವರು ಕೋಡಗವನ್ನು ಮುದ್ದಿಸಬಹುದು. ಆದರೆ ಆ ಕೋಡಗದ ಚಿತ್ರ ಊರಿಗೆಲ್ಲಾ ಬಹಿರಂಗವಾದರೆ, ನಾನಾದರೂ ಹೇಗೆ ಹರಿಕಥೆ ಸಂಗೀತ ಕಛೇರಿಗಳಿಗೆ ಹೋಗಲು ಸಾಧ್ಯ! ಎಲ್ಲರೂ ಈ ರತಿರೂಪಿಯೇ ಆ ಸಿಡಿಮುಖಿಯಲ್ಲಿ ಚಿತ್ರಿತನಾದ ಕೋಡಂಗನ ಕೈಹಿಡಿದವಳು ಎಂದು ಮೂದಲಿಸಿ ನೋಡುತ್ತಾರೆ. ಕಾರಣ ನಿಮ್ಮ ಚಿತ್ರ ಆ ಹೆಸರಾಂತ ಪತ್ರಿಕೆಯಲ್ಲಿ ಬಂದರೆ ನಾನು ವಿವಾಹವಿಚ್ಛೇದನ ಪಡೆದೇ ಪಡೆಯುತ್ತೇನೆ ಎಂದು ಅಭಯ ಕೊಟ್ಟಿದ್ದಾಳೆ.

ಸಂಪಾದಕ: "ಭಗವಂತಾ! ನಿನ್ನ ಸಂಸಾರ ಸೋಬಾನೆಯನ್ನು ಕೇಳಲು ನಾನು ಸಿದ್ಧನಿಲ್ಲ! ಹೆಸರು ನೋಡಿ ಭೇಟಿಗೆ ಅವಕಾಶವಿತ್ತೆ. ತೊಲಗು!! ಹಾಗೂ ನಿನ್ನ ದಿಟವಾದ ಹೆಸರೇನು?"

ಆತ ಕೈಯಲ್ಲಿದ್ದ ಟೋಪಿಯನ್ನು ಝುಳಪಿಸುತ್ತಾ "ಸಂಪಾದಕರೇ! ನನ್ನ ಹೆಸರು ಪಂಚಾಪಕೇಶಐಯ್ಯನವರೆಂದು. ಆ ಹೆಸರನ್ನು ಹೇಳಿದರೆ ಭೇಟಿ ದುರ್ಲಭವೆಂದು ಈ ಅಣಕವಾಡಿದೆ. ಈ ನನ್ನ ಕೈಯಲ್ಲಿರುವ ಟೋಪಿಯ ಮಹತ್ವ ನಿಮಗೆ ತಿಳಿಯದು. ಇದನ್ನು ಹಾಕಿಕೊಂಡು ನಾನು ಎಲ್ಲಿಗೆ ಹೋದರೂ ಯಾರೂ ಅಭ್ಯಂತರಮಾಡುವುದಿಲ್ಲ. ಯಾರ ಕಣ್ಣಿಗೂ ಕಾಣಬರುವುದಿಲ್ಲ. ಇದು ಮಾಯಾ ಟೋಪಿ. ನೋಡಿ! ಇದನ್ನು ಹಾಕಿಕೊಂಡು ನಾನು ಸಚಿವ ಸಭೆಯಲ್ಲಿ ಇದ್ದರೂ ಯಾರಿಗೂ ಕಾಣಬರುವುದಿಲ್ಲ. ರಾಜ್ಯಪಾಲ ರಾಜ್ಯಪಾಲಕ ಇವರ ವಿರಸ ಭೇಟಿಯಲ್ಲಿ ನಾನು ಪ್ರತ್ಯಕ್ಷನಾಗಿದ್ದರೂ ಯಾರಿಗೂ ಕಾಣಿಸುವುದಿಲ್ಲ. ಈ ಗಂಡ ಆ ಹೆಂಡತಿ,ಗಳ ಸಂಭಾಷಣೆಯನ್ನು ಕೂಡ ಅವರಿಗೆ ಕಾಣಿಸದಂತೇ ಕೇಳಬಲ್ಲೆ. ಶ್ರೀ ಟಿ. ಟಿ. ಕೆ. ಅವರು ಮುಂದೆ ಹಾಕಬಹುದಾದ ತೆರಿಗೆಗಳ ಸೂಚನೆಯನ್ನು ಅವರಿಗೆ ಮೊದಲೇ ನಿಮ್ಮ ಪತ್ರಿಕೆಯಲ್ಲಿ ಅರುಹಬಲ್ಲೆ! ಇಂತಹ ನನ್ನನ್ನು, ಈ ಮಾಯಾಟೋಪೀ ಅಸ್ತ್ರಧಾರಿಯಾದ ನನ್ನನ್ನು ನೀವು ಈ ರೀತಿ ತೊಲಗು ಎಂದರೆ, ಎಣ್ಣೆ ಬರುವ ಹೊತ್ತಿಗೆ ಕಣ್ಣುಮುಚ್ಚಿಕೊಂಡಂತೇ ಸರಿ! ಸರಿ!!

ಇದೋ ನೋಡಿ! ಎಂದು ಕೈಯಲ್ಲಿ ಝುಳಪಿಸುತ್ತಿದ್ದ ಆ ಟೋಪಿಯನ್ನು ತಲೆಗೇರಿಸಿದ....

ಸಂಪಾದಕರೆದುರಿಗೆ ಎಲ್ಲವೂ ನಿರ್ವಾಣ! ಭಯದಿಂದ ಕೂಗಿದಾತ "ಅಯ್ಯಾ! ಅಯ್ಯಾ! ನಿನ್ನ ಚಿತ್ರವನ್ನು ನಾಳಿನಿಂದ ಒಂದುವಾರ ಪ್ರತಿ ಪುಟದಲ್ಲೂ ಹಾಕುತ್ತೇನೆ ತ್ರಿವರ್ಣರಂಜಿತ ಚಿತ್ರವನ್ನೂ ಹಾಕುತ್ತೇನೆ ದಯೆಮಾಡಿ ಸೇವಕನ ಮೇಲೆ ಕನಿಕರದ ಹನಿಗಳನ್ನು ವರ್ಷಿಸು" ಎಂದೆಲ್ಲಾ ತೋಡಿಕೊಂಡ. ತಿರುಪತಿ ಜೋಳಾಜಿಗೆ ಹರಕೆ ಹೊತ್ತ.

ಹಳೇ ಸಂಚಿಕೆಗಳ ಹಿಂದಿನಿಂದ ಎದ್ದುನಿಂತ 'ಆತ' ತನ್ನ ಅಸ್ತ್ರವನ್ನು ಝುಳಪಿಸುತ್ತಾ ಆಗ ಮಾತನ್ನು ಮುಂದುವರಿಸಿದ. "ಭೋ! ಸಂಪಾದಕನೇ! ನಿನ್ನ ಭೀತಿಯ ಪ್ರಾರ್ಥನೆಗೆ, ಮಾರಿಮಾತೆಯಂತೆ ನಾನೂ ಸಂತುಷ್ಟನಾದೆ. ಇನ್ನುಮೇಲೆ ಈ ದೇಶದಲ್ಲಿ ಯಾವ ರಾಜಕೀಯ ಗುಪ್ತ ಸುದ್ದಿಯಿರಲಿ, ಯಾವ ಸಾಮಾಜಿಕ ಗುಟ್ಟುಗಳಿರಲಿ, ಯಾವ ಸಂಸಾರದ ಕುಂದುಗಳಿರಲಿ, ಎಲ್ಲವನ್ನೂ ನಾನು ಈ ಮಾಯಾ ಟೋಪಿಯ ಮಾಂತ್ರಿಕತನದಿಂದ ಅರಿತು ನಿನಗೆ ದಯಪಾಲಿಸುತ್ತೇನೆ. ಆದರೆ ಮರೆಯಬೇಡ! ಒಂದು ವಾರ ಎಲ್ಲ ಪುಟಗಳಲ್ಲೂ ನನ್ನ ಚಿತ್ರ ಬಂದೇ ಬರಬೇಕು!" ಎಂದು ಅಭಯವಚನವನ್ನಿತ್ತು ಆಶೀರ್ವ'ಧಿ'ಸಿದ.

* * *

ಏನಯ್ಯಾ! ಈ ಅಡುಗೂಲಜ್ಜಿ ಕತೆ ಎಂದೆನ್ನಬಹುದು ನೀವು! ಆದರೆ ನೋಡಿ! ಆ ಪತ್ರಿಕೆಯಲ್ಲಿ ಅಂದಿನಿಂದ ಬಂದ ಸುದ್ದಿಗಳೆಲ್ಲವೂ ಮುಂದೆ ಸತ್ಯವಾದುವು. ಒಂದಾ

ಣೆಂಗು ಹಾಗೂ ಆರು ನಯಾಪೈಸಾದ ಆ ಪತ್ರಿಕೆಯು, ಪ್ರಕಟಣವಾದ ಅರ್ಧ ಗಂಟೆಯಲ್ಲೇ ಎಂಟಾಣೆಗೆ ಹಾಗೂ ಐವತ್ತು ನಯಾಪೈಸಾಗಳಿಗೆ, ಮೊದಲು ಕೈ ಬದಲಿಸಿ, ಕಡೆಗೆ ಅರ್ಧ ದಿನದಲ್ಲಿ, ಆರನೇ ಕೈ ಬದಲಿಸಿದಾಗ ಒಂದು ರೂಪಾಯಿ ಹಾಗೂ ನೂರು ನಯಾಪೈಸಾಗಳಿಗೆ ಮಾರಾಟವಾಯಿತು.

ಸಂಪಾದಕರು, ಪತ್ರಿಕೋದ್ಯಮಿಗಳ ಒಡಾವಣೆಯಲ್ಲಿ, ಹಿರಿಯಂತಸ್ತಿನ ಮನೆಯನ್ನು ಕಟ್ಟಿಕೊಂಡರು; "ಆತ"ನು ಕೊಟ್ಟ ಸುದ್ದಿಗಳಿಂದ.

*　　*　　*

ಆ ಪತ್ರಿಕೆಯಲ್ಲಿ ಅನೂಚಾನವಾಗಿ ಏಳುದಿನ ಆ ಪತ್ರಿಕೆಯಲ್ಲಿ ತನ್ನ ಚಿತ್ರ, ವರ್ಣರಂಜಿತ ಚಿತ್ರ, ಅನುಮಾನಕ್ಕೆ ಎಡೆಕೊಡದ ಚಿತ್ರ, ಬಂದುದನ್ನು, ಪ್ರತಿ ಪುಟದಲ್ಲೂ ಬಂದುದನ್ನು, ನೋಡಿ 'ಆತ' ಹಿರಿಹಿಗ್ಗಿಹೋದ. "ಆತ"ನು ಬಂಧನಗಳಿಂದ ಮೋಕ್ಷ ಹೋದಂತವನಾದ.

ಎಲ್ಲ ಧರ್ಮಗಳನ್ನು ತ್ಯಜಿಸಿ ವಿರಕ್ತನಾದ ಆತನು ಜನಸೇವೆ, ದೇಶಸೇವೆಯನ್ನು ಸ್ವಾರ್ಥವಿಲ್ಲದೇ ಮಾಡಲೆತ್ನಿಸಿದನಂತೆ. ಆ ಮಾಯಾ ಟೋಪಿಯ ಮಹತ್ತಿನಿಂದ ಸಾಕಷ್ಟು ಹಿತವನ್ನೂ ಸಾಧಿಸಿದನಂತೆ.

ಚೆನ್ನಾಗಿದ್ದ ಆತ ಹೀಗಾದನಲ್ಲ ಎಂದು ಒಬ್ಬಿಬ್ಬರು ಮರುಗಿದರಂತೆ ತಲೆ ಕೆಟ್ಟಿದೆ ಆತನಿಗೆ ಎಂದು ಬಲು ದಿನದಿಂದ ನಮಗೆ ಗುಮಾನಿ ಇತ್ತು ಎಂದು ಹಲವರು ಮಿತ್ರರು ಅಂದು ಹೀಯಾಳಿಸಿದರಂತೆ.

ಮಾಯಾ ಟೋಪಿ ಹಾಕಿಕೊಂಡಮೇಲೆ ಮಾಯಾಜೀವನ ಖಂಡಿತ ಎಂದು ಆತನ ಬಾಲ್ಯದ ಒಡನಾಡಿಗಳು ಕೂಡ ಅಂದು ಮೂದಲಿಸಿದರಂತೆ.

**ನೀತಿ:**—ಯಾವ ಹುತ್ತದಲ್ಲಿನ ಯಾವ ಹಾವಿಗೆ ಯಾವಾಗ ಟೋಪೀ ಬೀಳುತ್ತೋ ಯಾರೂ ಕಾಣರು.

— ಪಾಪಿ.

——o——

ಪಿ. ಎಸ್. ಪಿ.ಯವರು ಮುಖ್ಯ ಸಚಿವರಾಗಲು ಬಯಸುವುದಿಲ್ಲವಂತೆ.

—ಪಂಡಿತಜೀಯವರು ಇನ್ನು ಮುಂದುವರಿಯಬಹುದು!

*　　*　　*

ವನಮಹೋತ್ಸವ ವಾರ, ವಿನಯ ವಾರ, ಕ್ಷಯನಿವಾರಣಾ ವಾರ, ಹೀಗೆಲ್ಲಾ ಕೇಂದ್ರದವರು ಆಚರಿಸುತ್ತಾರಲ್ಲಾ!

—ನಮ್ಮ ಬೆಂಗಳೂರಲ್ಲಿ "ಸೊಳ್ಳೆ ನಿರ್ಮೂಲನ ವಾರ" ಆಚರಿಸಬಾರದೇ? ಊರಿಗೆ ತಕ್ಕಂತೆ, ಕಾಲಕ್ಕೆ ಸರಿಯಾಗಿ ನಡೆಯಬಾರದೇ ಎಂದೊಬ್ಬರು ಕೇಳಿದ್ದಾರೆ.

# ಮನೆಗೆ ಬಂದಾಕಿ

ತೌರಿಗೆ ಹೋಗಿದ್ದ ಹೆಂಡತೀಗೆ "ಬೇಗ ಬಾ ಮನೇಲಿ ಬೇಜಾರಾಗುತ್ತೆ" ಎಂದು ಕಾಗದ. ಬರೆದು, ಹತ್ತಿರವೇ ಇದ್ದ ಪೋಸ್ಟಾಫೀಸಿನಲ್ಲಿ ಪೋಸ್ಟ್‌ಮಾಡಿ ಬರುವಷ್ಟರಲ್ಲಿಯೇ ನಮ್ಮನೆಯ ಹಜಾರದಲ್ಲಿ ಮಧ್ಯವಯಸ್ಸಿನ, ಮೇಲುಗಚ್ಚೆಯ, ಧಾರವಾಡದ ಬಳೆಯ ಹೆಂಗಸೊಬ್ಬಳು ಕಿಟಕಿಯನ್ನು ತೆರೆಯುತ್ತಿದ್ದಳು.

ನಾನು ಒಳಕ್ಕೆ ಬಂದ ಶಬ್ದವನ್ನು ಕೇಳಿ ಆಕೆ ನನ್ನ ಕಡೆ ತಿರುಗಿ "ನಿಮ್ಮದೇನ್ರೀ ಈ ಮನಿ, ಹೀಗೆ ಕದ ತೆಗೆದು ಹೋಗೀರಲ್ರೀ! ಯಾರು ಬಂದು ಏನು ಕೊಂಡೊಯ್ದರೂ ತಾಕೀತಿಲ್ಲಲ್ರೀ!" ಎಂದು ಹೇಳಿದಳು.

"ಕಾಗದ ಅಂಚೆಗೆ ಹಾಕಲಿಕ್ಕೆ........" ಎನ್ನುವಷ್ಟರಲ್ಲೇ, "ತಾಸು ಐದಾತ್ರೀ! ಬೇಗ ನಾನು ಹೋಟಲಿಗೆ ಹೋಗಬೇಕ್ರೀ, ಕಾರಣ ಮನೆ ನೋಡೀನ್ರೀ! ನೀರು ಮನಿ ಏನೂ ಸಾಲದ್ರೀ, ನಮ್ಮ ಯಜಮಾನ್ರು ಅಗದೀ ಆರಡಿ ಇದಾರ್ರೀ! ಸೂರು ತನಕ ಅವರ ತಲೇನೆ ಇದ್ದಾವಲ್ರೀ! ಅಡಿಗಿ ಮನಿ ಒಲಿ ಪಕ್ಕದಲ್ಲಿ ಕುಂತು ಹೇಂಗ್ರೀ ಭಕ್ರೀ ಬೇಯ್ಸೋದು! ತಾವೇ ಇಲ್ಲಲ್ರೀ, ಅಲ್ಲಿ ಕುಂತು ಉಣ್ಣಲಿಕ್ಕೆ, ಏನು ಮಲಗೋ ಮನೀನ್ರೀ! ಒಬ್ಬರು ಮಲಗಿದ್ರೆ ಇಬ್ಬರು ಎದ್ದು ಬರಬೇಕು, ನಮ್ಮ ಯಜಮಾನ್ರು ಹಜಾರದಲ್ಲಿ ಕುಂತರೆ ಸಾಮಾನ್ಯ ೪-೫ ಮಂದಿ ಸುತ್ತ ಇದ್ದೇ ಇರ್ತಾರ್ರೀ. ಅವರು ರಿಜಿಸ್ಟ್ರಿ ಆಫೀಸಿನಲ್ಲಿ ಕಾರಕೂನರಿದ್ದಾರ್ರೀ. ಬರೋರು ಹೋಗೋರು ಬಲು ಮಂದಿ ಕಣ್ರೀ! ಈ ಮನಿ ಬೇಕಾದರೆ ನೋಡಿ ಬಾ, ಸರ್ಕಾರ ಹೊರಗಡಿ ಇಂದ ಬಂದ ಮೈಸೂರು ನೌಕರರಿಗೆ, ಯಾವ ಮನಿ ಬೇಕಾದರೂ ಬಿಡಿಸಿ ಕೊಡ್ತೀವಂತ ಅಂದಾರ್ರೀ! ಕಾರಣ ಬಂದೀನ್ರೀ! ಆದರೆ ಈ ಮನಿ ಏನೂ ಚೆಂದಿಲ್ರೀ!"

ಒಂದೇ ಸಮನೆ ಆಕಿ ಅಂತಾನೇ ಇದ್ದಾಳೆ.

ನನಗೆ ಬೆವರುತ್ತಿದೆ ಮೈಯೆಲ್ಲಾ! ನಮ್ಮ ಘನ ಸರ್ಕಾರ ಅತಿಥಿ ಅಭ್ಯಾಗತ ಸೋದರ ಕಾರಕೂನರ ಸಲುವಾಗಿ, ನಮ್ಮನ್ನು ಅರಳಿಮರದ ಕೆಳಗೆ ನಾಗರ ಪ್ರತಿಮೆಗಳಡಿಯಲ್ಲಿ ವಾಸವಾಗಿರಿ ಎಂದು ಕಾನೂನು ಹೊರಡಿಸಿದರೂ, ಅದು ದೇಶಪ್ರೇಮದ ಕುರುಹೇ ಅಲ್ಲವೇ? ಹಾಗಿದ್ದರೆ ಮರದಡಿ ವಾಸ ಖಂಡಿತವಾದರೆ, ಬೇಗ ಇನ್ನೊಂದು

ಕಾಗದ ಮಡದಿಗೆ ಬರೆದು "ಹೀಗಾಯ್ತಮ್ಮ, ಇದ್ದಲ್ಲೇ ಸುಖವಾಗಿರು" ಎಂದು ಜಾಗರೂಕನಾಗಿರಬಹುದು. ಹಾಗಾಗಿ ಸಂಸಾರ ಕೆಟ್ಟರೂ ಕಾಸಾದರೂ ಬರಬಹುದೇನೋ ಎಂಬ ಆಶೆ. ಆದ್ದರಿಂದ ಮಧ್ಯೆ ಬಾಯಿ ಹಾಕಿ ನಾನೇ ಹೇಳಿದೆ.

"ನಿಮಗಿಷ್ಟವಿರಲಿ ಬಿಡಲಿ, ಈ ಮನೆ ಬಾಡಿಗೆ ಇನ್ನೂರು ರೂಪಾಯಿ" ಎಂದು. ಇದರಿಂದ ಆಕೆ ಹೆದರಿ ಹೊರಟುಹೋಗಲಿ ಎಂದು.

ಸಬ್‌ರಿಜಿಸ್ಟ್ರಿ ಆಫೀಸ್ ಸಾಹೇಬರಿಗೆ ನಮ್ಮಲ್ಲಿ ೧೫೦ ರೂಪಾಯಿ ಸಂಬಳ. ಅಂದ ಮೇಲೆ ಅಲ್ಲಿಗೆ ಬಂದ ಕಾರಕೂನನಿಗೆ ಹೆಚ್ಚು ಎಂದರೆ ನೂರೇ ಇರಬೇಕು, ಪಗಾರ ಅಂತ ಕರೆದರೂನು ಎಂದುಕೊಂಡೆ.

ಆದರೆ ಆಕೆ ಹೆದರುವ ಕುಳದ ಹಾಗೆ ಕಾಣಿಸಲಿಲ್ಲ.

"ಏನು ಮಾತು ಅಂತ ಆಡೀರ್ರೀ! ಇನ್ನೂರು ಮುನ್ನೂರಾಗಲೀ ಕೊಡಲಿಕ್ಕೆ ತಯಾರಿದ್ದೀವ್ರೀ ಆದ್ರೆ, ಈ ಮನೀಗೆ ಅಷ್ಟಾ!" ಎಂದಳು.

"ಅಂದರೆ, ನಿಮ್ಮ ಯಜಮಾನ್ರಿಗೆ ಪಗಾರ ಏನೋ" ಎಂತ ಕೇಳೀಬಿಟ್ಟೆ.

"ನಾನ್ನೂರು ಪಗಾರ್ರೀ! ಮೇಲಿ ಸಾವಿರ ಸಿಕ್ಕೀಸಿಗುತ್ತ್ರೀ!" ಎಂದಳಾಕೆ.

"ಅಂದಮೇಲೆ ಒಳ್ಳೆ ಮನೆ ಒಂದಿದೆಯಮ್ಮಾ, ನಿಮಗೆ ಎಲ್ಲಾ ಸೌಕರ್ಯವೂ ಅಲ್ಲಿ ಸಿಗುತ್ತದೆ. ಆರಡಿಯೋರು ಝಳಕಮಾಡಬಹುದು, ಎಂಟಡಿಯ ಎಂಟೆಂಟು ಜನ ಮಲಗುವ ಕೊಠಡಿ ಅದೆ. ಅದರ ವಿಳಾಸ ಕೊಡುತ್ತೇನೆ. ನೋಡಿ! ಪಸಂದಾದರೆ ಅದನ್ನೇ ಮೊದಲು ಹಿಡಿದುಬಿಡಿ" ಎಂದು ನಮ್ರತೆಯಿಂದ ಹೇಳಿ, ಬೇಗ ಒಂದು ವಿಳಾಸವನ್ನು ಬರೆದುಕೊಟ್ಟೆ.

"ಗುಟ್ಟಹಳ್ಳಿ ಪಕ್ಕದಲ್ಲಿರುವ ರಾಜಾಮಹಲ್, ನಂಬರು ಕೊನೆಯದು, ಅರಮನೆ ರಸ್ತೆ, ಹೈಗ್ರೌಂಡ್ಸ್" ಎಂದು.

ಆಕೆ ಅಲ್ಲಿಗೆ ಹೊರಟುಹೋದಳು.

ಆಕೆ ಅಲ್ಲಿಗೆ ಹೋಗಿ ಒಪ್ಪುತ್ತಾಳೋ ಇಲ್ಲವೋ ಅವಳ ಯಜಮಾನ್ರ ತಲೇ ಬರಹ. ನಾನಂತೂ ಶಪಥಮಾಡಿದ್ದೇನೆ, ಮನೆ ಮುಂದಿನ ಬಾಗಿಲನ್ನು ಅರೆಕ್ಷಣವೂ ಇನ್ನು ಆರು ತಿಂಗಳು ತೆರೆಯುವುದಿಲ್ಲ. ಹಿತ್ತಲ ಬಾಗಿಲಲ್ಲೇ ಓಡಾಟ ಇಟ್ಟುಕೊಳ್ಳುತ್ತೇನೆ. ಹಾಗೂ ಬೇಗ ನಮ್ಮಾಕೆಗೆ ತಂತಿ ಮೇಲೆ ತಂತಿಕೊಟ್ಟು ಕರೆಸಿಕೊಳ್ಳುತ್ತೇನೆ.

—ಪ್ರಸಾದ್.

# ನನ್ನದೊಂದು ದೌರ್ಬಲ್ಯ

ಚಿಕ್ಕಪುಟ್ಟ ದೌರ್ಬಲ್ಯಗಳು ಪ್ರತಿಯೊಬ್ಬ ಮನುಷ್ಯನಲ್ಲಿಯೂ ಇರುತ್ತವೆನ್ನಿ. ಅಂಥಾ ದೌರ್ಬಲ್ಯಗಳೇ ಇಲ್ಲದವನು, ಯಾರೋ ಹೇಳಿದ ಹಾಗೆ, ದೇವರೇ ಇರಬೇಕು; ಅಥವಾ ಮಹಾ ಕಿರಾತನಿರಬೇಕು. ಸಾಮಾನ್ಯವಾಗಿ ನಾವು ಅಂಥ ದೌರ್ಬಲ್ಯಗಳನ್ನು ಕ್ಷಮಿಸುತ್ತೇವೆ. ಆದರೆ ನಮ್ಮ ಭಾವ ಅಂಥವರಲ್ಲ. ಅವರು ನನ್ನದೊಂದು ದೌರ್ಬಲ್ಯವನ್ನು ಕ್ಷಮಿಸಲಿಲ್ಲ.

ಮೊನ್ನೆ ಭಾವನವರ ಊರಿಗೆ ಹೋಗಿದ್ದೆ. ಊರಿನ ಸಂಗೀತ ಪ್ರಿಯರು ಬಿಸ್ಮಿಲ್ಲಾ ಖಾನರನ್ನು ಕರೆಸಿ ಷಹನಾಯ್ ಕಚೇರಿ ಏರ್ಪಡಿಸಿದ್ದರು. ಅಂದ ಮೇಲೆ ಕೇಳದೆ ಬಿಟ್ಟಿದ್ದುಂಟೆ? ಸರಿ, ನಾನೂ ಭಾವನವರೂ ಹೋಗಿದ್ದೆವು.

ಮಹಾನುಭಾವ ಬಲು ಸೊಗಸಾಗಿ ಬಾರಿಸುತ್ತಿದ್ದ. ಪಕ್ಕದಲ್ಲಿ ಕುಳಿತಿದ್ದ ಭಾವ ಮೈಮರೆತು ಕೇಳುತ್ತಿದ್ದರು. ಆದರೆ ನನಗೆ ಹಾಗೆ ಮೈಮರೆಯಲು ಸಾಧ್ಯವಾಗಲಿಲ್ಲ. ಹಾಗೆಂದ ಮಾತ್ರಕ್ಕೆ ನಾನೇನೂ ಸಂಗೀತದ ರುಚಿಯಿಲ್ಲದ ಗೊಡ್ಡು ಎಂದು ತಿಳಿಯಬೇಡಿ. ಮುಖ್ಯವಾಗಿ ಷಹನಾಯ್ ವಾದನದ ಕಡೆಗೆ ಸಂಪೂರ್ಣ ಗಮನ ಕೊಡಲಾಗದಂಥ ಸನ್ನಿವೇಶವೊಂದು ಅಲ್ಲಿತ್ತು. ಸಂಗೀತ ಪ್ರಾರಂಭವಾದೊಡನೆ ಹತ್ತಾರು ಮಂದಿ ಬಂದು ಸಂಗೀತಗಾರರ ಅಕ್ಕಪಕ್ಕದಲ್ಲಿ ವೇದಿಕೆಯ ಮೇಲೆ ಕುಳಿತರು. ಬಟ್ಟೆ ಬರೆಯಲ್ಲಿ ಅವರು ಎಲ್ಲರಂತಿರಲಿಲ್ಲ. ಅವರ ಮುಖಗಳ ಖಳೆಯೂ ಏನೋ ಒಂದು ರೀತಿ. ಆದರೆ ಅದೇನೂ ಮುಖ್ಯ ವಿಷಯವಲ್ಲ. ಸಂಗೀತ ಮುಂದುವರಿದಂತೆ ಅವರು ಹಾವ ಭಾವ ಉದ್ಗಾರ ವಿಲಾಸಗಳಿಂದ ನನ್ನ ಮನಸ್ಸಿನ ಅರ್ಧಪಾಲನ್ನಾದರೂ ತಮ್ಮ ಕಡೆಗೆ ಸೆಳೆದುಕೊಳ್ಳತೊಡಗಿದ್ದೇ ಗೋಳು. ತಲೆಮಾತ್ರ ತೂಗುತ್ತಿದ್ದವರು ಇದ್ದಕ್ಕಿದ್ದಂತೆ ಕೈ ಎತ್ತತೊಡಗಿದರು. ಮೂತಿಯಲ್ಲಿ ವಿವಿಧ ಭಾವಗಳನ್ನು ಪ್ರದರ್ಶಿಸತೊಡಗಿದರು. ರಾಗದ ನಡೆಗೆ ಹೊಂದಿಕೊಂಡು ಮೈಯನ್ನು ಅತ್ತ ಇತ್ತ ವಾಲಿಸಿದರು. ಇವರೇನು ತಮ್ಮ ಇಡೀ ದೇಹದಿಂದ ಸಂಗೀತಗಾರರಿಗೆ ಮಂಗಳಾರತಿ ಮಾಡುತ್ತಿದ್ದಾರೋ ಎನ್ನಿಸಿತು. 'ಹಾ' 'ಹೂ' 'ವಹವ್ವ' ಎಂದು ಉದ್ಗಾರ ಹೊರಡಿಸುವುದೂ ಹೆಚ್ಚಾಯಿತು. ಮಾಲ್‌ಕೌಂಸ್ ರಾಗದಲ್ಲಿ ಕಲಾವಿದರು ಒಂದು ಅತಿ ಕೌಶಲ್ಯ ಪೂರ್ಣವಾದ ತಿರುವಿಗೆ ಬಂದಾಗಲಂತೂ ಈ ಅಕ್ಕಪಕ್ಕದವರ ತಲೆಗಳಿಂದ ನಾಲ್ಕು ಟೋಪಿಗಳು ಉದುರಿಹೋದುವು.

ನಾನು ರೋಸಿಹೋಗಿ 'ಥತ್' ಎಂದೆ. ಸಂಗೀತದ ರಸಾನಂದದಲ್ಲಿ ಮುಳುಗಿದ್ದ ಭಾವನವರಿಗೆ ರಸಭಂಗವಾಯಿತು. ಆದರೆ ನಾನು ಸುಮ್ಮನಿರಲಿಲ್ಲ. ಯಾರು ಭಾವ ಅವರೆಲ್ಲ—ಯಾತಕ್ಕೆ ಹಾಗೆ ಎಗರಾಡ್ತಿದಾರೆ ಎಂದೆಲ್ಲ ಕೇಳಿದೆ.

ಮನೆಗೆ ಹೋದ ಮೇಲೆ ಭಾವ ನನ್ನನ್ನು ಧರಾಟಿಗೆ ತೆಗೆದುಕೊಂಡರು ಅಂಥ ಅಮೋಘ ಸಂಗೀತ ನಡೆಯುವಾಗ ಅಲ್ಪ ವಿಷಯಗಳ ಕಡೆಗೆ ಗಮನ ಕೊಡುವುದೇ ಎಂದು ಆಕ್ಷೇಪಿಸಿದರು ಅವರು ಹಾಗನ್ನುವುದು ಸರಿ. ಅವರ ಛಾತಿ ಹಾಗೆ. ಅವರು ಅಮೋಘವಾದ್ದರಲ್ಲಿ ಮೈಮರೆಯಬಲ್ಲವರು. ಆದರೆ ನನಗೋ, ನಂದನ ವನದಲ್ಲಿ ನಿಂತರೂ ಹೂಗಳ ಸೌಂದರ್ಯವು ಕಣ್ಣಿಗೆ ಬಿದ್ದಂತೆಯೇ, ಹಕ್ಕಿಗಳ ಕಲಕಲರವ ಕಿವಿಗೆ ಬಿದ್ದಂತೆಯೇ, ಕೋತಿಗಳ ಕುಣಿತವೂ ಮನಸೆಳೆಯುತ್ತದೆ. ನಂದನ ವನದಲ್ಲಿ ಕೋತಿ ಕುಣಿದರೆ ಅದೂ ಒಂದು ಸೊಗಸು. ಆದರೆ ಸಂಗೀತ ಕಚೇರಿಯಲ್ಲಿ ಹೇಗೆ ಭಾವ, ಎಂದೆ.

ಥೂ, ಅವರೆಲ್ಲ ನಮ್ಮೂರಿನ ಪ್ರಮುಖ ಸಂಗೀತ ಪ್ರೇಮಿಗಳು. ಸಂಗೀತ ಏರ್ಪಡಿಸಿದವರು. ಕೋತಿಗಳೆನ್ನುತ್ತೀಯಾ? ಎಂದು ಗದರಿಸಿದರು ಭಾವ.

ಅಂದಮೇಲೆ ಅವರೆಲ್ಲ ನಿಮ್ಮ ಹಾಗೆ, ತೆಪ್ಪಗೆ ಕುಳಿತು ಮೈಮರೆತು, ಕೇಳ ಬಾರದೇಕೆ? ಎಂದು ವಾದಿಸಿದೆ.

'ಏನೋ, ಕೆಲವರ ಅಭ್ಯಾಸ'—ಎಂದು ಬಾಯಿ ಹಾರಿಸಿದರು ಭಾವ.

ಅಂಥ ಅಭ್ಯಾಸವಿದ್ದರೆ ಎಲ್ಲರ ಜೊತೆಯಲ್ಲಿ ಕುಳಿತಿದ್ದರೇನಾಗುತ್ತಿತ್ತು? ವೇದಿಕೆಯ ಮೇಲೇರಿ ಯಾಕೆ ಹಾವ ಭಾವ ಪ್ರದರ್ಶನ? ಎಂದು ಪ್ರತಿವಾದಿಸಿದೆ ನಾನು.

"ಹೋಗೋ ಹುಡುಗು ಬುದ್ಧಿ; ನಿನಗೆ ತಿಳೀದು. ಎಲ್ಲ ಕಚೇರಿಗಳಲ್ಲಿಯೂ ಹಾಗೆಯೇ."

"ಹಾಗಿರಕೂಡದು."

"ಕೆಲವರು ಸಂಗೀತಗಾರರೆ ಎಷ್ಟೊಂದು ಎಗರಾಡುತ್ತಾರೆ ಗೊತ್ತೆ?"

"ಗೊತ್ತು. ಆದರೆ ಅದನ್ನು ಕ್ಷಮಿಸಬಹುದು—ಅವರು ಹಾವ ಭಾವ ಹೇಗಿದ್ದರೂ ಸಂಗೀತವನ್ನಾದರೂ ಕೊಡುತ್ತಾರೆ. ನಿಮ್ಮ "double-distilled" ಸಂಗೀತ ಪ್ರೇಮಿಗಳದು ಕಾಟ ಮಾತ್ರ."

"ಮುಖ್ಯ ನಿನಗೆ ಸಂಗೀತ ಕೇಳುವ ಕಿವಿಯಿಲ್ಲ. ಕೋತಿ ಕುಣಿತ ಮಾತ್ರ ಕಣ್ಣಿಗೆ ಬೀಳುತ್ತದೆ"—ಎಂದು ಆಚೆಗೆ ನಡೆದುಬಿಟ್ಟರು ಭಾವ.

ಅವರ ಮಾತು ಅರ್ಧ ಸತ್ಯ. ಅಮೋಘ ಸಂಗೀತದ ನಡುವೆಯೂ ಕೋತಿ ಕುಣಿತದ ಕಡೆಗೆ ಗಮನಕೊಡುವುದು ಒಂದು ದೌರ್ಬಲ್ಯವೆಂಬುದೇನೋ ನಿಜ. ಅದನ್ನವರು ಕ್ಷಮಿಸರು. ಆದರೆ ಸಂಗೀತ ಕಛೇರಿಗಳಲ್ಲಿ, ಸಂಗೀತ ಪ್ರೇಮಿಗಳ ಹಾವ ಭಾವ, ಫೋಟೋಗ್ರಾಫರುಗಳ ಫ್ಲಾಶ್ ಬಲ್ಬುಗಳ ಕೀಟಲೆ, ಭಾಷಣಕಾರರ ಹಾವಳಿ— ಇವೇ ಮುಂತಾದುವುಗಳು ಜಾಸ್ತಿಯಾಗುತ್ತಾ ಬಂದರೆ ನಾನು ಇದುವರೆಗೆ ಶಪಿಸಿಕೊಂಡಿದ್ದ ಗಗನ ಪಿಶಾಚಿ ರೇಡಿಯೋಗೇ ಶರಣುಹೋಗಿ ಉತ್ತಮ ಕಲಾವಿದರ ಸಂಗೀತಕೊಡುವಂತೆ ಅದನ್ನು ಒಲಿಸಿಕೊಳ್ಳಲು ಯತ್ನಿಸುತ್ತೇನೆ.

—ರಾಮಿ.

---

# ನನ್ನ ಮನೆ

ಬಾಗಿಲಲ್ಲೇ ಕತ್ತೆ ಮಲಗಿದೆ
ಹೊಸಲು ದಾಟಲು ಹೆದರಿಕೆ!
ಹಲವು ಗೊದ್ದಗಳಾಚೆ ಮೂಲೆಲಿ,
ಈಚೆ, ಗುಬ್ಬಿಯ ಗಲಿಬಿಲಿ!
ಭಾರಿ ಜೇಡರ ಬಲೆಗೆ ಇಲಿಗಳು
ಸಿಕ್ಕಿ, ನೇತಾಡುತ್ತಿವೆ!
ದೇವರಿರುವಾ ಗೂಡಿನೊಳಗೆ
ಕರಿಯ ಹೆಗ್ಗಣವೊಂದಿದೆ!
ಕೋಟಿ ಜಿರಲೆಗಳಡುಗೆ ಮನೆಯನು
ಲೂಟಿಮಾಡುತಲಿರುವವು!
ಸ್ನಾನಮಾಡುವ ಕೋಣೆಯಲ್ಲೂ
ಶ್ವಾನ ಮರಿಗಳು ಬಿದ್ದಿವೆ!
ಮಂಚ-ಮಲಗುವ ಮಂಚ-ಕೆಳಗೆ
ಹುತ್ತವೆದ್ದಿದೆ, ಎತ್ತರ!
ನಿದ್ದೆ ಬಾರದು, ಗೂಗೆ ಕೂಗಲು,
ಬೆಕ್ಕಿನಾರ್ಭಟ, ನಿತ್ಯವೂ!
ಆದರೀಮನೆ, ನನ್ನ ಮನೆ! ಅದ
ತೊರೆಯಲಾರೆನು, ಎಂದಿಗೂ.

—ಪಾಟಾಳಿ.

# ಅದೇ ಹಳ್ಳ

ಹೌದು! ಟಿಕೆಟ್ ಕೊಡಿ, ಎಂದು ನೀವೇನೋ ಕೇಳಿಬಿಡುತ್ತೀರಿ! ಅದನ್ನ ಹುಡುಕಿ ತೆಗೆಯುವವರೆಗೆ ನಿಮಗೆ ತಾಳ್ಮೆ ಇಲ್ಲವಲ್ಲಾ!

ಈ ಕೋಟು ಷರ್ಟ್ ಷರಾಯಿ ಇವುಗಳಿಗೋ, ಎಲ್ಲೆಲ್ಲೂ ಕಿಸೆಗಳು....ಈ ಗುಂಡಿಗಳನ್ನು ಕಳಚುವುದೇ ಒಂದು ಮಹಾ ಸಾಹಸ....ಕಿತ್ತುಹೋಗಿರುವ ಗುಂಡಿಗಳಿಗೆ ಬದಲಾಗಿ, ಅಲ್ಲಲ್ಲಿ ಸೇಫ್ಟಿ ಪಿನ್ನುಗಳನ್ನು ಬೇರೆ ಸಿಕ್ಕಿಸಿದೇನೆ....

ನಾವು ಒಳ್ಳೆ ಸಭ್ಯರು ಕಣ್ರಿ! ಪರರ ವಸ್ತುವಿಗೆ ಆಸೆಪಡುವವರಲ್ಲ .. ಈ ರೈಲು ಯಾರದು, ನಮ್ಮದು! ನಮ್ಮ ಮನೆಯಲ್ಲೇ ನಾವು ಕಳ್ಳತನ ಮಾಡಬಹುದೆ, ಹೇಳಿ.

ಹೋದ ತಿಂಗಳು, ಏನಾಯಿತು, ಅಂತೀರಿ? ಇದೇ ರೈಲು, ಪೂನಾ ಎಕ್ಸ್‌ಪ್ರೆಸ್... ನಾನೂ ನನ್ನ ಸ್ನೇಹಿತ ಕಂಠಿ ಇಬ್ಬರೂ, ಹುಬ್ಬಳ್ಳಿಗೆ ಹೋಗುತ್ತಿದ್ದೆವು. ಮೋಸಮಾಡುವ ಸ್ವಭಾವವೇ ಇಲ್ಲ, ನಮಗೆ ಒಂದಲ್ಲ, ಎರಡು ಟಿಕೆಟ್‌ಗಳನ್ನ ಪೂರ್ತ ಹಣ ಕೊಟ್ಟು, ಕೊಂಡುಕೊಂಡೆವು. ಕೈತೂತಿನಾಚೆಯಿಂದ ಆತ ಎರಡು ಚೀಟಿಗಳನ್ನ ಈಚೆಗೆ ನೂಕಿದ, ಪಾಪ! ಆದರೆ, ನನ್ನ ಕೈಗೆ ಬಂದದ್ದು, ಒಂದೇ ಒಂದು! ಹುಡುಕಿದೆ, ತಡಕಿದೆ, ಕೂಗಿದೆ, ರೇಗಿದೆ ...ಸಿಗಲಿಲ್ಲ ...

ನಾವಿಬ್ಬರೂ ಪ್ರಾಮಾಣಿಕರು. ಈಷದಪಿ ಅನ್ಯಾಯ ಮಾಡುವವರಲ್ಲ.... ಆದ್ದರಿಂದ, ಕೇಳಿ ಕಲೆಕ್ಟರೆ! ಏನುಮಾಡಿದೆವು ಗೊತ್ತೆ?

ನನ್ನ ಕೈಲಿದ್ದ ಟಿಕೆಟ್‌ನ ಕಂಠಿ ಕೈಗೆ ಕೊಟ್ಟು, ನಾನು ಬೆಂಚಿನ ಕೆಳಗೆ ಮಲಗಿದೆ....ಟಿಕೆಟ್ ಕೈಯಲ್ಲಿಲ್ಲದವನಿಗೆ ಬೆಂಚಿನ ಮೇಲೆ ಕೂರಲು ಅಧಿಕಾರವುಂಟೆ, ನೀವೇ ಹೇಳಿ....

ಅಲ್ಲ, ಸ್ವಾಮಿ! ಬೆಂಚಿನ ಕೆಳಗೆ ನೀವೇನಾದರೂ ಮಲಗಿದೀರಾ! ಥೂ! ಥೂ! ವಿಪರೀತ ಧೂಳು... ಜಿರಲೆಯ ಹಾವಳಿ....ಅಲ್ಲೇ ಉಗುಳುತ್ತಾರೆ ಹಾಳು ಜನ, ಎಕ್ಕಡಗಳ ರಾಶಿಗಳನ್ನ ಅಲ್ಲಿಗೇ ತಳ್ಳುತ್ತಾರೆ........ಇದನ್ನ ನಿಲ್ಲಿಸಬೇಕು, ನೀವು ದಯವಿಟ್ಟು....

ಆಗಲಿ........ತೆಗೆದು ತೋರಿಸುತ್ತೇನೆ........ಷರ್ಟಿನ ಒಳ ಜೇಬಿನಲ್ಲಿರಬೇಕು, ಟಿಕೀಟು!

ಅವತ್ತೇನಾಯ್ತು, ಅಂತೀರಿ! ಹೀಗೆಯೇ ಹುಡುಕಿದ, ಕಂಠಿ ಆ ಟಿಕೆಟ್ ಕಲೆಕ್ಟರ್ ಬಂದಾಗ....ನಾನು ಬೆಂಚಿನ ಕೆಳಗೆ ಮಲಗಿಕೊಂಡೇ ನಕ್ಕೆ, ಅವನ ಪರದಾಟ ಕೇಳಿ, ನಾನು ಇವತ್ತು ಕಿಸೆ ಕಿಸೆಯಲ್ಲೂ ಕೈ ತುರುಕುತ್ತಿರುವ ಹಾಗೆಯೇ ಅವನೂ ಅವತ್ತು ಆ ಟಿ. ಟಿ. ಸಿ. ಯನ್ನು ವಿಪರೀತ ಸತಾಯಿಸಿದ....ಆದರೆ, ಅವರೂ ಕೂಡ ನಿಮ್ಮ ಹಾಗೆಯೇ, ನಿಧಾನಸ್ಥರು.

ಕೊನೆಗೆ , ಕಂಠಿ, ಆ ಹೊತ್ತು, ತೆಗೆದ ಟಿಕೀಟ್‌ನ....ಕೊಟ್ಟ, ಆ ಟಿ. ಟಿ. ಸಿ. ಕೈಗೆ....ಕೇಳಿ, ಇಲ್ಲಿ, ಇದೇ ತಮಾಷೆ! ಅವರು ಅದನ್ನ ಕೈಗೆ ಇಸುಕೊಂಡು, ಹೇಳುತ್ತಾರೆ, "ಅಯ್ಯೋ! ಎರಡು ಟಿಕೀಟ್ ಇವೆಯಲ್ಲಾ, ಒಂದಕ್ಕೊಂದು ಅಂಟಿಕೊಂಡಿದೆ, ಅಷ್ಟೆ" ಅಂತ....

ಆಗ, ನಾನು ಆ ಹಾಳು ತಳದಿಂದ ಎದ್ದು ಈಚೆಗೆ ಬಂದೆ....ಏಕೆ ಹೇಳುತ್ತೇನೆ, ಅಂದರೆ, ನಾವು ಅಂಥ ಯೋಗ್ಯರು, ಎಂಥ ಕಷ್ಟಗಳನ್ನೆದುರಿಸಬೇಕಾಗಿ ಬಂದರೂ, ಸತ್ಯವನ್ನು ಪರಿಪಾಲಿಸುತ್ತೇವೆ, ಅಂತ ತಮಗೆ ಮನದಟ್ಟಾಗುವುದಕ್ಕೋಸ್ಕರ....

ಆ! ಇಲ್ಲಿದೆ, ಷರಾಯಿ ಜೋಬಿನಲ್ಲಿ....ಟಿಕೀಟ್ ಹುಬ್ಬಳ್ಳಿಗೆ....ನೋಡಿದಿರಾ! ನಾವೇನು ಸುಳ್ಳು ಹೇಳಿ, ರೈಲಿನವರಿಗೆ ಮೋಸಮಾಡಿ, ಸುಖಪ್ರಯಾಣ ಬಯಸುವವರಲ್ಲ, ರಿ!

ಏನು? ಇವತ್ತು ಕೂಡ, ಹಾಗಿಯೇ ಆಗಿದೆಯೆ? ಎರಡಿವೆಯೆ, ಟಿಕೀಟು? ....ನಿಜವಾಗಿಯೂ?

ಒಂದು,....ಎರಡು... ಹೌದೆ?

ಏನಾಯ್ತು, ಅಂತ ಹೇಳಿಬಿಡುತ್ತೇನೆ, ಟಿಕೀಟು ಕಲೆಕ್ಟರೆ? ಆ ಹೊತ್ತಿನ ಹಾಗೆ, ಇವತ್ತೂ ನಾನು ಕಂಠಿ ಇಬ್ಬರೂ....ಹುಬ್ಬಳ್ಳಿಗೆ....ಅಂತ, ಹೊರಟೆವು.... ಎರಡು ಟಿಕೀಟಿಗೆ ಹಣ ಕೊಟ್ಟರೆ, ಆ ಗಡಿಬಿಡಿಯಲ್ಲಿ, ಆತ ಒಂದನ್ನೇ ಕೊಟ್ಟ, ಅಂತ ಅಂದುಕೊಂಡು, ಅವತ್ತು ನಾನು ಬೆಂಚಿನ ಕೆಳಗೆ ಮಲಗಿದ ಹಾಗೆ, ಇವತ್ತು ಕಂಠಿಯನ್ನ ಮಲಗಿಸಿದೆ, ನಿಮ್ಮ ಹೆದರಿಕೆಯಿಂದಾಗಿ....

ಲೋ, ಕಂಠಿ, ಬಾರೋ!....ಎದ್ದು ಬಾರೋ....ಟಿಕೀಟ್ ಎರಡೂ ಇಲ್ಲೇ ಅವೆ....

ಥೂ! ಅಂಥ ಧೂಳಿನ ರಾಶಿ, ಕೆರಗಳ ಗುಡ್ಡ, ಅಲ್ಲೂ ಈ ಕಂಠಿ ಎಷ್ಟು ಆನಂದವಾಗಿ ನಿದ್ದೆ ಹೊಡೆಯುತ್ತಿದಾನೆ, ಸಾರ್!

ಎಬ್ಬಿಸಬೇಡಿ, ಹುಬ್ಬಳ್ಳಿಯತನಕ, ನಿದ್ದೆಮಾಡಲಿ.

—ಪರಪ್ಪಸ್ವಾಮಿ.

# ಗಿಫ್ಟು

ಮದುವೆ ಸೀಸನಯ್ಯೊ, ಬಂತು!
ಬಂತು ಎನಗೆ ಮತ್ತೆ ಗೋಳು!
ಇನ್ನು ನಂಟರಿಷ್ಟರೆಲ್ಲ ಬರೆದು
ಹಾಳು ಮೂಳು ಗೆಳೆಯರೆಲ್ಲ
ಹಳದಿ ಕೆಂಪು ಬಳಿದು ಪತ್ರ
ಕಳಿಸಿ, ಕಾಡಿ, ಬೇಡಿ, ಕರೆದು
ಬನ್ನಿ, ಬಂದು, ವಧುವ, ವರನ
ಹರಸಿ, ಕೊಟ್ಟು ಹೋಗಿ ಗಿಫ್ಟು
ಎಂಬ ಕಾಟ,....ಹೇಗೆ ತಡೆವೆ?

ವರಗೆ ಏನು ಕೊಡಲಿ ನಾನು?
ಚೌರ ಪೆಟ್ಟಿ? ಡಬ್ಬಿ ನಶ್ಯ?
ಹೊಗೆಯ ಬತ್ತಿ ಸೇದೆ, ಉರಿಯೆ?
ಕೋಟಿ ಸೂಟಿ ಹ್ಯಾಟಿ ಬ್ಯಾಟಿ?
ಟೈಯೆ? ಪಿನ್ನೆ? ಪೆನ್ನೆ? ಕಪ್ಪೆ?
ಹೊಲಸು ಬುಕ್ಕೆ ಬೇಕೆ? ಫ್ರೇಮೆ?
ನರ್ಗಿಸ್ ಚಿತ್ರ ಕೊಡಲು ಸಾಕೆ?
ಸತಿಯ ರೂಪ ಕಾಣದಿರಲು
ಕರಿಯ ಗಾಜ ಸುಲೋಚನೆ?

ಆಕೆಗೇನು ಕೊಡಲಿ ನಾನು?
ಉಣ್ಣೆದಾರದುಂಡೆ, ಸೂಜಿ,
ಬೆಣ್ಣೆಕಡೆಯೆ ಕೋಲು, ಹೂಜಿ,
ಪೌಡರಿರಿಸೆ ಡಬ್ಬವೆ? ಬಣ್ಣ
ತುಟಿಗೆ ಬಳಿವುದುಂಟೊ ಹೆಣ್ಣು?
ಕಣವೆ? ಹಣವೆ? ಸೀರೆಯೆ?
ಸೀರೆ ಅಂಚಿ? ಕೊಂಬೆ? ರಿಬ್ಬನೆ?
ಒಲೆಯೆ? ಓಲೆ, ಮೂಗುತಿ
ಬಲೆಯೆ? ಬುಕ್ಕೆ? ಕುಕ್ಕರೆ?

ಮದುವೆ ಸೀಸನಯ್ಯೊ, ಬಂತು!
ಬಂತು ಎನಗೆ ಮತ್ತೆ ಗೋಳು!

—ಶ್ರೀಮತಿ ಕೇಸರಿ.

——o——

**ಹಾದಿಯಲ್ಲಿ ಕೇಳಿಸಿದುದು—**

"ಅಲ್ರೀ—ಈ ಹಿಂದೂ ವಿವಾಹ ಮಸೂದೆ ಪ್ರಕಾರ ಒಬ್ಬ ಪತ್ನಿ ಇರುವಾಗ ಎರಡನೇ ವಿವಾಹವಾಗಬಾರದು ಅಂತಾರೆ. ಹಾಗೆ ಮಾಡಿದ್ದೇ ಆದರೆ ಏಳುವರ್ಷ ಕಠಿಣಶಿಕ್ಷೆ—ಜುಲ್ಮಾನೆ ವಿಧಿಸ್ತಾರಂತಲ್ಲಾ—ಒಂದುವೇಳೆ ಅದೆಲ್ಲಾ ಅನುಭವಿಸಿದರೆ ಆ ಎರಡನೇ ಆಕೇನ ಮನೆಗೆ ಕರ್ಕೊಂಡು ಬರ್ಬೋದೋ?"

— "ಕೇಫ"

# ಕುಮಾರವ್ಯಾಸ

## (ಮಧ್ವಂತರ್ಗತಕವಿಜೀವನ್ಯವಿಚಾರ)

---

ಕುಮಾರ ವ್ಯಾಸನು ಗದುಗು ಭಾರತವನ್ನು ಬರೆದ ಕವಿಯೆಂಬ ವಿಷಯದಲ್ಲಿ (ನಮ್ಮನ್ನು ಬಿಟ್ಟು) ಯಾರಿಗೂ ಸಂದೇಹವಿಲ್ಲ ಕುಮಾರವ್ಯಾಸನು ವೈಷ್ಣವ (ಮಾಧ್ವ)ನೆಂದು ಗಮಕ ಶಿಖಾಮಣಿ ಶ್ರೀ ಬಿಂದೂರಾಯರು, ಪುರಂದರದಾಸರು, ಶಾನುಭಾಚಾರ್ಯರು ಸಿದ್ಧಾಂತಮಾಡಿದ್ದಾರೆ. ವೀರಶೈವನೆಂಬ ವಿಷಯ ವ್ಯಕ್ತಪಡುತ್ತದೆ—ಗುರುರಾಜ ಚಾರಿತ್ರ ಕರ್ತರಿಂದ. ಸ್ಮಾರ್ತ ಬ್ರಾಹ್ಮಣನೆಂದು ಕುಮಾರ ವ್ಯಾಸನ ವಂಶೀಕರು ಹೇಳುತ್ತಾರೆ. ಅವನು ಯೋಗೀಂದ್ರನೆಂದು ಅನೇಕರು ನಂಬಿದರೂ, ಭೋಗೀಂದ್ರನಾಗಿರಬೇಕೆಂಬ ಸಂಶಯ ಬರುತ್ತದೆ ಕೆಲವರಿಗೆ. ಅವನು ಎಲ್ಲಿದ್ದ? ಏಕಿದ್ದ? ಹೇಗಿದ್ದ? ಎಂಬ ಪ್ರಶ್ನೆಗಳಿಗೆ ಉತ್ತರವೇ ಇಲ್ಲ. ಎಂದು ಇದ್ದ? ಸು. ೧೧೬೫ ರಿಂದ ಸು. ೧೫೯೦ ರ ಮಧ್ಯದಲ್ಲಿ ಯಾವಾಗ ಇದ್ದನೋ ಪತ್ತೆ ಹಚ್ಚುವುದು ಅಸಾಧ್ಯ. ಇಂತಹ ಸಂದೇಹ ಸಂದೋಹಗಳನ್ನು ಚರ್ಚಿಸಲೆಂದೇ ನಾವು, ಇದೋ, ಸಿದ್ಧರಾಗಿ ಹೊರಟಿದ್ದೇವೆ.

'ರಚಿಸಿದ ವರಕುಮಾರ ವ್ಯಾಸ ಭಾರತವ' ಎಂಬ ಹೇಳಿಕೆಯ ಮೇಲೆಯೇ ಕುಮಾರ ವ್ಯಾಸನು ಭಾರತವನ್ನು ರಚಿಸಿದನೆಂದು ನಂಬಲಾಗಿದೆ. ಕುಮಾರ ವ್ಯಾಸನು ಭಾರತವನ್ನು ಬರೆದನೆಂದು ನಂಬಲು ಪೀಠಿಕಾ ಸಂಧಿಯಲ್ಲಿ ಅನೇಕ ದಾಖಲೆಗಳಿದ್ದರೂ, ಅವನ್ನು ನಂಬಬೇಕಾಗಿಲ್ಲ. ನಂಬಿದರೆ ಅದು ಭ್ರಾಂತಿಜನ್ಯವಾದೀತು. ಕುಮಾರ ವ್ಯಾಸನು ಪೀಠಿಕಾ ಸಂಧಿಯಲ್ಲೇ ನಿಜವನ್ನು ತಿಳಿಸಿಬಿಟ್ಟಿದ್ದಾನೆ—'ವೀರನಾರಾಯಣನೆ ಕವಿ, ಲಿಪಿಗಾರ ಕುವರ ವ್ಯಾಸ' ಎಂದು. ಇದರಿಂದ ಭಾರತದ ಕವಿ ವೀರನಾರಾಯಣನೆಂದಾಯಿತು. ವೀರನಾರಾಯಣನು ಕವಿಯೋ ಎಂಬ ಸಂಶಯವು ಕೆಲವರನ್ನು ಭೇತಾಳದಂತೆ ಬೆನ್ನುಹತ್ತಿದೆ. ಹಾಗೆ ಬೆನ್ನುಹತ್ತಿದ್ದು ಒಳ್ಳೆಯದೇ ಆಯಿತು. 'ಸಂಶಯಾತ್ಮಾ ವಿನಶ್ಯತಿ'.

ಆದರೆ, ಬತ್ತಲೇಶ್ವರನೇ ಕುಮಾರವ್ಯಾಸನೆಂದು ನಂಬಲು ಪ್ರಬಲವಾದ ಕಾರಣಗಳಿವೆ. ಏಕೆಂದರೆ, ಸದರೀ ಬತ್ತಲೇಶ್ವರನು ಒಂದು ರಾಮಾಯಣವನ್ನು ಬರೆದಿರುವನೆಂದು ನಂಬಲು ಪ್ರಬಲವಾದ ಕಾರಣಗಳಿರುವುದಾಗಿ ತಿಳಿದುಬಂದಿದೆಯೆಂದು ಕವಿಚರಿತಕಾರರು ತಿಳಿಸಿದಾರೆ. ಆ ರಾಮಾಯಣದ ಒಂದು ಅಸಮಗ್ರ ಪ್ರತಿಯು

(ನಮಗೆ ಸಿಕ್ಕಿದೆ) ಕವಿಚರಿತಕಾರರಿಗೆ ಸಿಕ್ಕಿತ್ತಂತೆ. ಅದರಲ್ಲಿ ಸಿಕ್ಕ ಒಂದು ಪದ್ಯ ಹೀಗಿದೆಯಂತೆ.—

ಹರಿಕತೆಗೆ ಸರಿಹುಟ್ಟಿದಿದನಾ
ದರಿಸಿದವರಿಹ ಪರವ ಗೆಲುವರು
ಧರೆಗೆ ಸೂರೆಯನಿತ್ತ ವರಕವಿ ಬತ್ತಲೇಶ್ವರನು.

ಬಂದನೋಲಗದೊಳಗೆ ವಾನರ
ವೃಂದ ನಲಿ ನಲಿದಾಡುತಿರಲಾ
ನಂದದಲಿ ವರವಿತ್ತ ರಘುಪತಿ ಬತ್ತಲೇಶ್ವರಗೆ.

ಆಹಾ! ಎಂತಹ ಅದ್ಭುತ ಪ್ರಾಸಜ್ಞಾನ! ಇರಲಿ; ಕುಮಾರವ್ಯಾಸನ ಒಂದು ತುಕಡ ವನ್ನು ಪರಿಶೀಲಿಸೋಣ: 'ಕೆಣಕಿದರೆ ಶುಕರೂಪನಲ್ಲವೆ ಕುಣಿಸಿ ನಗನೇ ಕವಿಕುಮಾರ ವ್ಯಾಸ ನುಳಿದವರ?' ಈಗ ಯೋಚಿಸಿ, ಶುಕನು ಬತ್ತಲೆಯಿದ್ದವನು. ಹಾಗೆಯೇ ಕುಮಾರವ್ಯಾಸನ ಕಾವ್ಯ ಜ್ಞಾನವೂ ಬತ್ತಲೆ. ತಾನು ಲಿಪಿಮಾಡಿದ ಕಾವ್ಯ ತನ್ನದೇ ಎಂದು ಉಳಿದವರನ್ನು ಕುಣಿಸಿ ನಗುತ್ತಿದ್ದ. ಆದುದರಿಂದ ಬತ್ತಲೇಶ್ವರನೇ ಕುಮಾರ ವ್ಯಾಸ. ಒಂದು ಭಾಮಿನೀ ಷಟ್ಪದಿಗೆ ಪ್ರಾಸ ಕೂಡಿಸಲಾರದವನು ಗದುಗು ಭಾರತ ವನ್ನು ಬರೆದಿರುವುದು ಅಸಂಭವ. ವೀರನಾರಾಯಣನೇ ಕವಿ ಎಂಬ ವಿಷಯ ಈಗ ಸ್ವಯಂ ವ್ಯಕ್ತವಾಯಿತು.

ಆದುದರಿಂದ ಈಗ ಕುಮಾರವ್ಯಾಸನ ಕಾಲವನ್ನು ನಿರ್ಣಯಿಸಬೇಕೋ ಅಥವಾ ನಿಜವಾದ ಕವಿ, ವೀರನಾರಾಯಣನ ಕಾಲ ನಿರ್ಣಯ ಮಾಡಬೇಕೋ ತಿಳಿಯದಾಗಿದೆ.

ಮೊದಲು ಭಾರತ ಕರ್ತೃ ವೀರನಾರಾಯಣನ ಕಾಲ ನಿರ್ಣಯಮಾಡಿದರೆ ನಂತರ ಕುಮಾರವ್ಯಾಸನನ್ನು ಒಂದು ಐವತ್ತು ವರ್ಷ ಹಿಂದೆ ಮುಂದೆ ಮಾಡಿ ಯಾವುದೋ ಒಂದು ಇಸವಿಯಲ್ಲಿ ಜೀವಿಸುವಂತೆ ಮಾಡುವುದು ಕಷ್ಟವಲ್ಲ. ವೀರ ನಾರಾಯಣನ ವಂಶವೃಕ್ಷವನ್ನು ಕುಮಾರವ್ಯಾಸನೇ ತಿಳಿಸಿದಾನೆ. ಅದು ಹೀಗಿದೆ.—

ವೇದಪುರುಷ – ಸುತ – ಅವನ ಸುತ – ಸುತನ ಸಹೋದರ – ಹೆಮ್ಮಗ – ಮಗ – ತಳೋದರಿ – ಮಾತುಳ – ಅವನ ಮಾವ – ಅವನನ್ನು ಅತುಳ ಭುಜಬಲದಿ ಕಾದಿ ಗೆಲಿದವ – ಅವನ ಅಣ್ಣ – ಅವ್ವೆ – ಅವಳ ನಾದಿನಿ – ಅವಳ ಜಠರದಲಿ ಜನಿಸಿದನ್ ಆದಿಮೂರ್ತಿ. ಅರ್ಥಾತ್ ವೀರನಾರಾಯಣ.

ಆದರೆ, ಈ ವೇದಪುರುಷನು ಯಾವಾಗ ಜೀವಿಸಿದ್ದನೋ ತಿಳಿಯದು. ಆದುದರಿಂದ ವೀರನಾರಾಯಣನ ಕಾಲವನ್ನು ಹಾಗೆ ತಿಳಿಯುವುದು ದುಸ್ಸಾಧ್ಯ. ಸುದೈವ ವಶಾತ್ ಆದಿಮೂರ್ತಿಯ ಪರಿಚಯ ನಮಗಿದೆ. ಆದಿಮೂರ್ತಿಯು ಸದಾ ರಮೆಯ ಅಣ್ಣ, ಹಾಗೂ ಸಮಕಾಲೀನ. ಆದುದರಿಂದ ಸದಾರಮೆಯ ಕಾಲವನ್ನು

ಕಂಡುಹಿಡಿದರೆ, ವೀರನಾರಾಯಣನ ಕಾಲವನ್ನೂ, ಬಳಿಕ ಕುಮಾರವ್ಯಾಸನ ಕಾಲವನ್ನೂ ಕಂಡಿಹಿಡಿಯಬಹುದು.

ಹಾಗಾದರೆ, ಸದಾರವೆಯ ಕಾಲವಾವುದು? ಈ ಪ್ರಶ್ನೆಗೆ ಉತ್ತರವನ್ನು ಉಳಿದ ಸಂಶೋಧಕರು ಕೊಡಲಿ. ಅಲ್ಲದೆ ಈ ರಗಳೆಯೆಲ್ಲ ಏಕೆ? ಕವಿಚರಿತಕಾರರಂತೆ ಕುಮಾರವ್ಯಾಸನ ಕಾಲ ಸು. 1430 ಎಂದು ಒಪ್ಪಿಬಿಟ್ಟರೆ ನಿಶ್ಚಿಂತೆಯಿಂದ ನಿದ್ದೆಮಾಡಬಹುದು.(ಅಥವಾ ದುಡಿದು, ಸಂಸಾರವನ್ನು ಮರ್ಯಾದೆಯಿಂದ ತೂಗಿಸಬಹುದು )

ಕುಮಾರವ್ಯಾಸನು ಮಾಧ್ವನೆಂದು ಕೆಲವರು ಹೇಳುತ್ತಾರೆ. ಹಾಗೆ ಹೇಳುವವರನ್ನು ಒದೆಯುತ್ತೇವೆ ಎಂದು ಇನ್ನುಳಿದ ಕೆಲವರು ಹೇಳುತ್ತಾ ಇದಾರೆ. ಆದುದರಿಂದ ಈ ಪ್ರಶೆಯನ್ನು ಬಿಡಿಸುವುದು ಸ್ವಲ್ಪ ಕಷ್ಟಕ್ಕೆ ಬಂದಿದೆ. ನಮ್ಮ ಮಟ್ಟಿಗೆ, ನಿಷ್ಪಕ್ಷಪಾತವಾಗಿ ಹೇಳಬೇಕೆಂದರೆ (ನಾವು ಸಹ ಸ್ಮಾರ್ತರಾದುದರಿಂದ) ಅವನು ಸ್ಮಾರ್ತ ಬ್ರಾಹ್ಮಣನೇ ಸರಿ.

ಕುಮಾರವ್ಯಾಸನ ಅಂಕಿತನಾಮ ನಾರಣಪ್ಪನಲ್ಲವೇ? ನಾರಣಪ್ಪನ ಅಜ್ಜ ನೆಟ್ಟ ಆಲದಮರ ಇದ್ದುದು ಕೋಳಿವಾಡದಲ್ಲಿ. ಅವನ ಬಾಲ್ಯದ ಘಟನೆಗಳು ತಿಳಿದುಬಂದಿಲ್ಲ. ದೊಡ್ಡವನಾದ ಮೇಲೆ ಕೊಳಲ ರಾಗದ ರಹಿ, ಕಲ್ಲಿಯ ಕಲಸುಗೂಳಿನ ರುಚಿ ತಿಳಿದವು. ಹಳ್ಳಿಕಾತಿಯರೊಳೆಗುಡಿಯ ಹಾದರ (ಸ್ವಾಮಿ ನನ್ನ ಮಾತಲ್ಲ ಇದು. ಅವನದೇ) ವನ್ನು ಪರಿಶೀಲನೆ ಮಾಡಿರಲಿಕ್ಕೂ ಸಾಕು. ಇಲ್ಲದಿರಲಿಕ್ಕೂ ಸಾಕು.

ಕುಮಾರವ್ಯಾಸನ ತಂದೆ ಲಕ್ಕರಸನು. ತನ್ನ ಮಗ ತನ್ನ ಕಣ್ಣಮುಂದೆಯೇ ಇರಲಿ ಎಂದು ಅವನನ್ನು ವಿಜಯನಗರಕ್ಕೆ ಕರೆದೊಯ್ದು ಕರಣಿಕತನಕ್ಕೆ ಹಾಕಿದ್ದಾನು. ದೇವರಾಯನ ಆಸ್ಥಾನದಲ್ಲಿದ್ದ ಎಲ್ಲರಿಗೂ ಬಡಿದ ರೋಗವೇ ಇವನಿಗೂ ಬಡಿದು, ಅವನು ಕಾವ್ಯರಚನೆಮಾಡಲು ತೊಡಗಿರಬೇಕು. ಮೇಲೆ ಹೇಳಿದಂಥ ಪದ್ಯಗಳನ್ನು ಬರೆದು ಅಲ್ಲಿದ್ದ ಕವಿಗಳಿಂದ ಬೈಗಳು ತಿಂದಿದ್ದಾನು. ತನ್ನ ಕಾವ್ಯವನ್ನು ಬೈದವರ ಬಗ್ಗೆ ಅವನ ಮನಸ್ಸಿನಲ್ಲಿ ಸ್ವಲ್ಪ ರೇಗು ಬಂದು ಇವರಿಗೆ ತಕ್ಕ ಮಟ್ಟ ಹಾಕಲು ಯೋಚಿಸಿರಬೇಕು. ಆದುದರಿಂದ ಅವನು ಕಾವ್ಯ ವಿಮರ್ಶಕನಾಗಿರಬೇಕು. ಇರಬೇಕು ಎನ್ನಬೇಕೇಕೆ. ಆದ.

ಆಗಿನ ಕಾಲದ ವಿಮರ್ಶನಾ ಪದ್ಧತಿ ಸ್ವಲ್ಪ ವಿಚಿತ್ರವಾಗಿತ್ತು. ಪ್ರೌಢ ದೇವರಾಯನು ತನ್ನ ಆಸ್ಥಾನದಲ್ಲಿ ೧೦೧ ವಿರಕ್ತರನ್ನು ಇಟ್ಟುಕೊಂಡಿದ್ದನಷ್ಟೆ. ಯಾವನಾದರೂ ಕವಿ ಬಂದರೆ ಅವರು ಅವನ ಕಾವ್ಯದ ಕಟ್ಟನ್ನು ತರಿಸಿ ಅದನ್ನು ಹಿಂಡು ಎನ್ನುತ್ತಿದ್ದರು. ಅವನು ತಾಳೆಗರಿಗಳನ್ನು ಹಿಂಡಿದರೆ, ಆಗ ರಕ್ತ ಸೋರಿದರೆ, ಅದು ರಸವತ್ಕಾವ್ಯ. ಇಲ್ಲದಿದ್ದರೆ ಇಲ್ಲ. ಕುಮಾರವ್ಯಾಸನು ಈ ಪದ್ಧತಿಯನ್ನು ವಿರೋಧಿಸಿ

ಹೀಗೆಂದು ವಾದಿಸಿದ, "ವಿರಕ್ತರು ಆಸ್ಥಾನದಲ್ಲಿ ಇರಬೇಕೇಕೆ? ಒಂದು ಪಕ್ಷ ಇರಲಿ. ಕಾವ್ಯ ವಿಮರ್ಶನಶಕ್ತಿ ವಿರಕ್ತರಿಗೆ ಬಂದೀತಾದರೂ ಹೇಗೆ? ವಿರಕ್ತರು ರಸವನ್ನು ವರ್ಜಿಸಿದವರಾದುದರಿಂದ ಅವರಿಗೆ ರಸಾಸ್ವಾದನದ ಹಕ್ಕೂ ಇಲ್ಲ, ರಸವಿಮರ್ಶನ ಶಕ್ತಿ ಇರಲು ಸಾಧ್ಯವೂ ಇಲ್ಲ ಅಲ್ಲದೆ ತಾಳೆ ಗರಿಗಳನ್ನು ಹಿಂಡಿದರೆ ರಕ್ತಬರುವು ದಾದರೂ ಎಂತು. ಅವು ಒಣಗರಿಗಳಾದುದರಿಂದ ನೀರೂ ಸಹ ಬರಲಾರದು."

ಹಾಗಾದರೆ ಆ ದಿನ ಚಾಮರಸನ ಓಲೆಗರಿ ಹಿಂಡಿದಾಗ ರಕ್ತಬಂತಲ್ಲ ಎಂಬ ಸಂಶಯವನ್ನು ಮುಕುಂದಪೆದ್ದಿ ಇತರರು ಸೂಚಿಸಲು ಕುಮಾರವ್ಯಾಸ 'ಆ ಒಣ ಗರಿಗಳ ನಡುವೆ ಮೊನಚಾದ ಕಬ್ಬಿಣದ ಕಂಠಪತ್ರ ಇತ್ತು' ಎಂದ. ಮುಕುಂದಪೆದ್ದಿ ಮೊದಲಾದವರು ಅವನ ಆಪ್ತಮಿತ್ರರಾದರು. ಸರಿ—ಮುಸೆದು ದಿತ್ತಂಡಕ್ಕೆ ಮತ್ಸರ.

ಇದು ಮುಸೆಯಲು ಇನ್ನೊಂದು ಕಾರಣವೂ ಇದ್ದಿರಬಹುದು. ಕುಮಾರ ವ್ಯಾಸನು ಕರಣಿಕನಾಗಿದ್ದನಷ್ಟೆ. ಇವನು ಒಮ್ಮೆ ಬರೆದಿದ್ದುದನ್ನು ಮತ್ತೆ ನೋಡು ತ್ತಿರಲಿಲ್ಲ. ನೇರವಾಗಿ ಬರೆಯದೆ ಬಳಸಿ ಬರೆಯುತ್ತಿದ್ದ ಅದರರ್ಥ ಅವನ ಹೊರತು ಇನ್ನಾರಿಗೂ ತಿಳಿಯುವಂತಿಲ್ಲ. ರಾಜ ಅವನನ್ನೇ ಕರೆಸಿ ಕೇಳಬೇಕಾಗಿತ್ತು. ಇದಲ್ಲದೆ ಅವನು ಕೇವಲ ಕುತೂಹಲದಿಂದ ಆಸ್ಥಾನದ ಗುರುನಿತಂಬದ ವಿತತ ವಕ್ಷದ ವನಿತೆಯರನ್ನು ನೋಡುತ್ತಿದ್ದುದನ್ನು ಉಳಿದವರು ಅಪಾರ್ಥ ಮಾಡಿರಲಿಕ್ಕೆ ಸಾಕು. ಅಂತೂ ಈ ಬಗ್ಗೆ ರಾಜನ ಹತ್ತಿರ ದೂರು ಹೋಯಿತು. ಆಗ ಕುಮಾರವ್ಯಾಸ ಸೊಡ್ಡಳ ಬಾಚರಸನ ಕತೆಯನ್ನು ಹೇಳಿ ತನ್ನ ಮೇಲಿನ ಮೊದಲಿನ ದೂರಿಗೆ ಉತ್ತರ ಕೊಟ್ಟ. ಎರಡನೆಯ ದೂರಿಗೆ ಅವಕಾಶ ಕಲ್ಪಿಸಿದವನು ಕುಮಾರವ್ಯಾಸನೇ. ಒಬ್ಬಳು ಕೊಂಕಣ ವನಿತೆ, ಒಬ್ಬಳು ಮಾಳವದವಳನ್ನು ಕುಮಾರವ್ಯಾಸ ಬೈಯ್ಯ ಲೇಕೆ. ತಮಿಳು ಹೆಂಗಸರನ್ನು ಹೊಗಳಬೇಕೇಕೆ. ಭಾರತದ ಚಪ್ಪನ್ನೈವತ್ತಾರು ದೇಶದ ಹೆಂಗಸರಲ್ಲಿ ಇಬ್ಬರನ್ನು ಮಾತ್ರ ಬೈಯ್ಯಲೇಕೆ. Something has happened. What! ಎಂದರು ಅವನ ವಿರೋಧಿಗಳು.

ಅಲ್ಲದೆ ಜಗಳವಾಡುವಾಗ ಕುಮಾರವ್ಯಾಸ ಉಪಯೋಗಿಸುತ್ತಿದ್ದ ಶಬ್ದಗಳು ಸಹ ಬಿಸಿ ಬಿಸಿ ಬಿಸಿಯಾಗಿಯೇ ಇದ್ದಿರಬೇಕು. 'ಕೆರವು ನಿಮ್ಮಯ ಬಾಯಲಿ, ನೀನು ಶಿಷ್ಟನೆ ಜಗದ ಭಂಡನಲಾ' 'ನೀ ಜಾರ, ಜಾರೆಯ ಮಕ್ಕಳಿಗೆ ನೀ ಜೀವ' 'ಕೂಳು ಗೇಡಿಂಗೊಡಲ ಹೊರುವಿರಿ' 'ಹುಟ್ಟಿದೆಯೊ ಹಾದರಕೆ?'

ಹೀಗಾದರೆ ಯಾರು ತಾನೇ ಸಹಿಸಲಾದೀತು? ಕುಮಾರವ್ಯಾಸನ ಕೀರ್ತಿ ದೇವರಾಯನವರೆಗೂ ಹಬ್ಬಿರಬೇಕು. ಆದರೆ ಮುಕುಂದಪೆದ್ದಿ ಮತ್ತು ಇತರರ ಕೃಪಾಕಟಾಕ್ಷದಿಂದ ಅವನು ಅಲ್ಲಿಯೇ ಇದ್ದ. ಮುಕುಂದಪೆದ್ದಿಯ ಚಿತಾವಣಿ ಯಿಂದ ರಾಮಾಯಣವನ್ನು ಬರೆಯಲು ಒಪ್ಪಿ ಅದನ್ನು ಬರೆಯಲಾಗದೆ ಒದ್ದಾಡು ತ್ತಿದ್ದ. ಸ್ವಲ್ಪ ದಿವಸವಾದ ಮೇಲೆ 'ತಿಣುಕಿದನು ಫಣಿರಾಯ ರಾಮಾಯಣದ

ಕವಿಗಳ ಭಾರದಲಿ' ಆದುದರಿಂದ ನಾನು ಭಾರತ ಬರೆಯುತ್ತೇನೆ ಎಂದು ಆರಂಭಿಸಿದ, ಬರೆಯುತ್ತಲೇ ಇರಲಿಲ್ಲ. ಕಾವ್ಯ ಪ್ರಜ್ಞೆಯಿಲ್ಲ. ಇನ್ನೇನು ಬರೆದಾನು. ಹೀಗಾಗಿ ಕುಮಾರವ್ಯಾಸ ಫಜೀತಿಗೆ ಸಿಕ್ಕಿಕೊಂಡ. ಅದನ್ನೆಲ್ಲಾ ದಬಾವಣೆಯ ಮೇಲೆ ತಿದ್ದಿಕೊಳ್ಳಲು ನೋಡಿದ.

ಒಂದು ದಿನ, ದೇವರಾಯ ಕುಮಾರವ್ಯಾಸನ ಭಾರತವನ್ನು ತರಿಸಿ ನೋಡಿದ. ಅದರಲ್ಲಿ ಏನಾದರೂ ಇದ್ದರೆ ತಾನೆ? ಅವನಿಗೆ ಸಿಟ್ಟು ಬಂತು. ನಾನು ಅಮರುಕ ಶತಕವನ್ನು ಕನ್ನಡಿಸುವುದು ಬಿಟ್ಟು ಇವನ ಬರಿ ಓಲೆಗರಿ ನೋಡುವಂತಾಯಿತಲ್ಲಾ ಎಂದು. ಏನು ಮಾಡುವುದು? ಆಸ್ಥಾನದಲ್ಲಿರುವ ಜನರೆಲ್ಲರೂ ಕವಿಗಳಾಗಿರುವಾಗ, ಬರೀ ತಾಳೆಗರಿಯ ಓಲೆಯುವನು ಇವನೇಕೆ ಇಲ್ಲಿ ಎಂದು. ಕರೆದ—ಲಕ್ಕರಸನನ್ನು. ಕೊಡೋ ಇವನಿಗೊಂದು Ph.D. ಡಿಗ್ರಿ—ಎಂದ. ತೆಗೆದುಕೋ ಎಂದು Ph.D. ಡಿಗ್ರಿಯನ್ನು ಕುಮಾರವ್ಯಾಸನ ಕಡೆಗೆಸೆದ. 'ಬುದ್ಧಿಯವರು ಸ್ನಾನ ಒಪ್ಪಿಸಿಕೊಳ್ಳಿ' ಎಂದರು ರಾಜಭಟರು. ದೇವರಾಯ ಸ್ನಾನಕ್ಕೆ ಹೋದ.

'ಭಾರತವ ಮರೆದಾ ಕುಮಾರ ವ್ಯಾಸಂಗೊಸೆದು, ಭೂರಮಣನಮಲ ವಿಮಲ ಸ್ನಾನ....' ಎಂದು ಗುರುರಾಜ ಚಾರಿತ್ರಕರ್ತರು ಹೇಳಿದುದು ಮೇಲಿನ ಅರ್ಥದಲ್ಲೇ ಇರಬೇಕು.

ಆಗ, ಕೆಲಸ ಹೋದಾಗ, ಕುಮಾರವ್ಯಾಸನು ಸಂತರ್ಪಣೆಗಳಿಗೆ ಹೋಗಲು ಆರಂಭಿಸಿ, ಹರುಕು ಎಲೆ ಬೇಡವೆಂದು ಅತ್ತ, ಹುಡುಗನ ಪಕ್ಕದಲ್ಲಿ ಕುಳಿತಿದ್ದ ವೀರ ನಾರಾಯಣನ ಪತ್ತೆ ಹಚ್ಚಿ, ಅವನು ಬರೆದ ಭಾರತವನ್ನು ಲಿಪಿಮಾಡಲು ಆರಂಭಿಸಿದ. ಅವನ ಆದಿ ಪರ್ವ ಇತ್ಯಾದಿಗಳು ಚೆನ್ನಾದುದನ್ನು ಕಂಡು ಲಕ್ಕಣ್ಣ ದಂಡೇಶ ಮೊದಲಾದವರು ಅವನ ಬೆನ್ನು ಹತ್ತಿದರು. ನೀನು ಹೇಗಿದ್ದರೂ ಚಾಮರಸನ ತಂಗಿಯನ್ನು ಮದುವೆಯಾಗಿರುವೆ. ನೀನೂ ವೀರಶೈವನಾಗಿ ಬಿಡು ಎಂದು. ಕುಮಾರವ್ಯಾಸ ಒಪ್ಪಲಿಲ್ಲ. 'ಮುಸೆದುದಿತ್ತಂಡಕ್ಕೆ ಮತ್ಸರ'

ಈ ತರಲೆ ಬೇಡವೆಂದು ಕುಮಾರವ್ಯಾಸ ಗದುಗಿಗೆ ಹಿಂದಿರುಗಿದ. ಭಾರತವನ್ನು ಪ್ರತಿಮಾಡಿದ. ಕೋಳಿವಾಡದ ಗೌಡನಾಗಿ ಸುಖವಾಗಿದ್ದ. ಅಥವಾ ಭಾರತವನ್ನು ಅವನೇ ಬರೆದಿರಬಹುದು. 'ವೀರನಾರಾಯಣನೆ ಕವಿ' ಎಂಬುದು ಪ್ರಕ್ಷಿಪ್ತ ಭಾಗವಾಗಿರಬಹುದು.

ಒಂದು ಪಕ್ಷ ಅವನೇ ಭಾರತವನ್ನು ಬರೆದಿರುವುದಾದರೆ—ಅಲ್ಲ ಸ್ವಾಮಿ ಬತ್ತಲೇಶ್ವರನೇ ಕುಮಾರವ್ಯಾಸನಾಗಿರುವುದು ನಿಜವಾದರೆ—ಒಂದು ಪದ್ಯಕ್ಕೆ ಪ್ರಾಸ ಕೂಡಿಸಲಾರದವ ಇದನ್ನೆಲ್ಲಾ ಹೇಗೆ ಬರೆದನೋ ಭಗವಂತನೇ ಬಲ್ಲ. **ಅಟ್ಟಕ್ಕೆ ಹಾರದ ಬೊಡ್ಡಿಯ ಸಂಗತಿ.**

— ಅ. ರಾ. ಸೇ.

---

# ಕವಿ ಚರಮ

ಇವ (ಸದ್ಯ !) ಸತ್ತನ್—ಸತ್ತ್ರ ಮೇಲಿನ್ನೊಮ್ಮೆ ಪುಟ್ಟನ್
ಇರುವನಕ ಕಾವ್ಯಧರ್ಮವನಿವನು ಸುಟ್ಟನ್
ಕಂಡವರ ಅಕ್ಕಿಯನು ಕದ್ದಡಿಗೆಯಟ್ಟನ್
ಪೂವಿಂದ ಪೂವಿಂಗೆ ಪಾರಿದನು ಪಲ್ಕು!—[Excuse me Mirle ah !]
ಓದುಗನ ಕಣ್ಣೀವೆ ಇವ ಪಡೆದ ಶುಲ್ಕ
ನೂರಾರು ಪುಸ್ತಕದಿ ಹೊಲಸ ತುಂಬಿಟ್ಟನ್
ಅದ ಕೊಂಡು ಓದಿದವ ಅಕಟಕಟ ಕೆಟ್ಟನ್
ಅಂತು ಕೊನೆಗೊಮ್ಮೆಗೋತಾ ಹೊಡೆದು ಬಿಟ್ಟನ್
ಧೈರ್ಯ-ದಿಂದರು ಮಾನವೆ—ಅವನಿನ್ನು ಪುಟ್ಟನ್
ಪೂರ ಸತ್ತನು ಕೊರಮ—ಅವನಿಗಿದೆ ಚರಮ.

— ಅ ರಾ. ಸೇ.



ಶ್ರೀಮನ್ನಾರಾಯಣ್‌ರವರು ರೆಸಿಡೆನ್ಸಿಯಲ್ಲಿ ನನ್ನ ಹತ್ತಿರ ಒಂದು ಗಂಟೆ ಮಾತನಾಡಿದರು ಅಂದಮೇಲೆ ನನಗೇ ಕಾಂಗ್ರೇಸ್ ಟಿಕೇಟ್—ಬೇರೆ ಕೆಲಸ ಏಕೆ ಹುಡುಕಲೀ! ಯಜಮಾನ್ರೆ.

# ಕಾಳಿದಾಸನ ಪೇಚು

ಶಕುಂತಲೆ ದುಷ್ಯಂತರ ಪ್ರಣಯ ಕಥೆಯನ್ನು ಮೊದಲು ಕಾಳಿದಾಸ, ಉಜ್ಜಯಿನಿ ನಗರದಿಂದ, ಒಂದು ಭಾರಿ ಪ್ರಮಾಣದ ಕಾದಂಬರಿಯಾಗಿಯೇ ಬರೆದು ಪ್ರಕಟಿಸಿದ್ದ, ಎಂಬ ಗುಟ್ಟನ್ನು ಯಾರೂ ಅರಿಯರು. ಅದೊಂದು ಅತ್ಯಂತ ಪ್ರಗತಿ ಶೀಲ ಕಾದಂಬರಿಯಾಗಿಯೇ ಮೊದಲು ಹೊರಬಿದ್ದದ್ದು. ಕಣ್ವ ಎಂಬ ಸ್ಕೂಲ್ ಮಾಸ್ತರ ಹಿರಿಯ ಮಗಳು ಶಕುಂತಲೆ....ಅಂದರೆ, ಆ ಊರಿನ ಸುಪ್ರಸಿದ್ಧ ವೇಶ್ಯೆ ಯಲ್ಲಿ ಆ ಮಾಸ್ತರಿಗುಂಟಾದ ವ್ಯಾಮೋಹದಿಂದ ಉತ್ಪನ್ನವಾದವಳು....ಪ್ರಿಯಂವದೆ ಅನಸೂಯಾ ಇಬ್ಬರೂ, ಶಕುಂತಲೆಯ ಕ್ಲಾಸ್‌ಮೇಟುಗಳು. ಅವರ ಸಹವಾಸ ದಿಂದಲೂ, ತಾಯಿಯ ಪ್ರೇರಣೆಯಿಂದಲೂ, ಅವಳು ತನ್ನ ಜೊತೆ, ಸ್ಕೂಲಲ್ಲಿ ಓದು ತ್ತಿದ್ದ ಹುಡುಗರೊಂದಿಗೆ, ಪ್ರೇಮ ಪತ್ರಗಳನ್ನು ಬರೆಯುವ ಹವ್ಯಾಸಕ್ಕೆ ಬಿದ್ದಳು.... ದುಷ್ಯಂತ ಅಷ್ಟ ಒಬ್ಬ ಪೋಲಿ! ಅವನಿಗೆ ಆಗಲೇ ಲಗ್ನವಾಗಿತ್ತು....ಆದರೂ, ಪರಸ್ಪರ ಬಂದು ಹೋಗುವಿಕೆ ನಡೆಯುತ್ತಲೇ ಇತ್ತು....ದುಷ್ಯಂತ ಶಾಲೆಯಿಂದ ಕಾಲೇಜಿಗೆ ಹತ್ತಿ, ದೊಡ್ಡವರ ಆಶ್ರಯ ಪಡೆದು, ಪೋಲೀಸ್ ಇಲಾಖೆಯ ಪ್ರೊಬೋಷ ನರಿ ಗಿಟ್ಟಿಸಿ, ರಾಜಧಾನಿಗೆ ಹೋಗಿ ಭಾರಿ ಬಂಗಲಿ ಬಾಡಿಗೆಗೆ ತೆಗೆದು, ಸುಖವಾಗಿರು ತ್ತಾನೆ. ದುಶ್ಯಂತ ಹಿಂದೆ ಕೊಟ್ಟಿದ್ದ ಒಂದು ಚಿನ್ನದ ಸರವನ್ನು ಯಾರೋ ಕದ್ದ ರೆಂದು ಶಕುಂತಲೆ ದೂರು ಕೊಟ್ಟು, ಅದು ಸಿಕ್ಕಾಗ, ಅವಳು ಕೋರ್ಟಿನಲ್ಲಿ, ಅದನ್ನ ತನಗೆ ಇಂಥವರೇ ಇತ್ತರೆಂದು ಸಾಕ್ಷ್ಯ ಹೇಳಿ, ಆತನಿಗೆ ಅಪಮಾನ ತರುತ್ತಾಳೆ.... ಕೂಡಲೇ ದುಷ್ಯಂತ ಅವಳನ್ನ ಪತ್ತೆಹಚ್ಚಿ, ಹೊಲಸು ನಡತೆಯ ಒಂದು ಬಾಲಿಕಾ ಶ್ರಮಕ್ಕೆ ಸೇರಿಸುತ್ತಾನೆ ...ಅಲ್ಲಿ ಅವಳು ಒಂದು ಹೆಣ್ಣು ಕೂಸನ್ನು ಹಡೆದು, ಗುಪ್ತ ವಾಗಿ ಬೇರೊಂದು ಬಾಲಿಕಾಶ್ರಮಕ್ಕೆ ಹೋಗುತ್ತಾಳೆ. ಈ ಸಮಾಚಾರ ದುಷ್ಯಂತ ನಿಗೆ ತಿಳಿಯದು....ವರ್ಷಗಳು ಉರುಳುತ್ತವೆ ...ಕಾದಂಬರಿಯ ೨೫೬ನೇ ಪುಟದಲ್ಲಿ ದುಷ್ಯಂತ ಆ ಎರಡನೆಯ ಬಾಲಿಕಾಶ್ರಮದ ವಾರ್ಷಿಕೋತ್ಸವದಲ್ಲಿ ಅಧ್ಯಕ್ಷಸ್ಥಾನ ವಹಿಸುತ್ತಾನೆ....ಶಕುಂತಲೆ ತನ್ನ ಮಗಳ ಕೈಯ್ಯಲ್ಲಿ ಹಾರಕೊಟ್ಟು, ಅಧ್ಯಕ್ಷರ ಕೊರ ಳಿಗೆ ಅರ್ಪಿಸುತ್ತಾಳೆ....ಅದರ ಕುತ್ತಿಗೆಯಲ್ಲಿ ತಾನು ಶಕುಂತಳೆಗಿತ್ತ ಸರವನ್ನು ಕಂಡು, ದುಷ್ಯಂತ ಮೂರ್ಛೆ ಬೀಳುತ್ತಾನೆ. ಆಸ್ಪತ್ರೆ ಸೇರುತ್ತಾನೆ. ಹಾಸಿಗೆಯಲ್ಲಿ ಬಗೆ ಬಗೆ ಯಾಗಿ ಕನವರಿಸುತ್ತಾನೆ .. ಅದನ್ನು ಕೇಳಿದ ಡಾಕ್ಟರುಗಳು ಅವನ ಹಿಂದಿನ ಲೀಲಾ ವಿಲಾಸಗಳನ್ನೂ, ಕಪಟಕೃತ್ಯಗಳನ್ನೂ ತಿಳಿದು ವರದಿಮಾಡಿ, ಸಕಾರದವರು ಒಂದು

ವಿಚಾರಣಾ ಸಮಿತಿಯನ್ನು ರಚಿಸುತ್ತಾರೆ. ದುಷ್ಯಂತನನ್ನು ನೌಕರಿಯಿಂದ ತೆಗೆದು ಹಾಕುತ್ತಾರೆ. ಕಡುಬಡವನಾಗುತ್ತಾನೆ. ಕೆಟ್ಟ ರೋಗಗಳು ಕೆಟ್ಟಚಾಳಿಗಳಿಂದ ಉಂಟಾಗುತ್ತವೆ....ಶಕುಂತಲೆ ಅವನನ್ನು ಹಿಂಬಾಲಿಸಿ ಶುಶ್ರೂಷಿಸುತ್ತಾಳೆ. ಮಗಳು ಅವರಿಬ್ಬರಿಗೋಸ್ಕರ ತಿರುಪೆ ಬೇಡುತ್ತಾಳೆ.. ಬಂಡವಾಳಗಾರರ ದುಷ್ಪ್ರವೃತ್ತಿಗೊಳಗಾಗುತ್ತಾಳೆ....ಇತ್ಯಾದಿ, ಇತ್ಯಾದಿ, ಕಾದಂಬರಿ ೬೦೦ ಪುಟದಷ್ಟು ಸಿಹಿಸಿಹಿಯಾಗಿ ಬೆಳೆಯುತ್ತದೆ....ಹತ್ತು ಹತ್ತು ಪುಟಕ್ಕೊಂದರಂತೆ ಅಶ್ಲೀಲ ಸನ್ನಿವೇಶಗಳು! ಈ ಕಾದಂಬರಿ ಆಗ ಬಹು ಜನಪ್ರಿಯವಾಗಿತ್ತಂತೆ. ಒಟ್ಟು ೨೮ ಸಾವಿರ ಓಲೆಗರಿ ಪ್ರತಿಗಳು ಖರ್ಚಾಗಿ ಕಾಳಿದಾಸ ಒಂದು ಅಮೃತಶಿಲಾ ಉಪ್ಪರಿಗೆ ಕಟ್ಟಿಸಿಕೊಂಡು, ಎರಡು ರಥಗಳ ಸಹಿತ, ಸುಖಜೀವನ ನಡೆಸಲು ಇದರಿಂದ ಸಹಾಯಕವಾಯಿತಂತೆ ....ಇದು, ಕಾಳಿದಾಸನಿಗೆ ಕೇವಲ ೨೫ ವರ್ಷ ವಯಸ್ಸಾಗಿದ್ದಾಗ!

೩೦ನೆಯ ವಯಸ್ಸಿನಲ್ಲಿ, ಕಾಳಿದಾಸನಿಗೆ ಕೊಂಚ ನಾಚಿಕೆಯೇ ಆಯಿತು! ಆ ಕಾದಂಬರಿಯ ಎರಡನೆಯ ಲಿಪಿಕರಣ ಮಾಡಿದಾಗ, ಶಾಲಾ ಕಾಲೇಜು ಹುಡುಗ ಹುಡುಗಿಯರ ಅಸಹ್ಯ ಪ್ರೇಮ ಸನ್ನಿವೇಶಗಳನ್ನು ಕತ್ತರಿಸಿ, ಆಸ್ಪತ್ರೆಯನ್ನು ತೆಗೆದು ಹಾಕಿ, ಬಾಲಿಕಾಶ್ರಮದ ವಾತಾವರಣವನ್ನು ಅವನು ಪರಿಶುದ್ಧಗೊಳಿಸಿದ. ಆದ್ದರಿಂದ ಆ ಪರಿಷ್ಕೃತ ಕಾದಂಬರಿಯ ಓಲೆಗರಿ ಪ್ರತಿಗಳು ೧೩ ಸಾವಿರ ಖರ್ಚಾಗುವುದೂ ಕಷ್ಟವಾಯಿತು.

೩೮ನೆಯ ವಯಸ್ಸಿನಲ್ಲಿ, ಕಾಳಿದಾಸನಿಗೆ ಮತ್ತೆ ಛೆ, ಎನಿಸಿತು. ಶಾಲಾ ಮಾಸ್ತರ ಮೇಲೆ ತನಗೆ ಚಿಕ್ಕಂದಿನಿಂದಲೂ ಇದ್ದ ಕೋಪ ಕಡಮೆಯಾಯಿತು. ಮಹಿಳೆಯರ ಮೇಲಿನ ಗೌರವ ಹೆಚ್ಚಿತು ಕಣ್ವರನ್ನು ಮಹಾಯೋಗ್ಯರೆಂದೂ, ಶಕುಂತಲೆ ಅವರ ಸಾಕುಮಗಳೆಂದೂ, ಪ್ರಿಯಂವದೆ ಅನಸೂಯಾ ಇಬ್ಬರೂ ಉತ್ತಮ ನಡತೆಯವರೆಂದೂ, ಅವರಿದ್ದ ಸ್ಥಳ ಋಷ್ಯಾಶ್ರಮದೋಪಾದಿ ಎಂದೂ ತಿದ್ದಿ ಬರೆದು, ತನ್ನ ಕಾದಂಬರಿಯನ್ನು ಸಾತ್ವಿಕ ಸಾಬೂನಿಂದ ತೊಳೆದು, ಮೂರನೆಯ ಲಿಪಿಕರಣ ಮಾಡಿದಾಗ, ಜನ ಬೇಸತ್ತು, ಅವನನ್ನು ಅತಿಯಾಗಿ ಹೀಯಾಳಿಸಿ, ಆತ ಪ್ರತಿ ತಯಾರಿಸಿದ್ದ ೬ ಸಾವಿರ ಓಲೆಗರಿ ಗ್ರಂಥಗಳನ್ನು ಕೊಳ್ಳಲು ಹತ್ತು ವರ್ಷ ತಡೆದರು ... ಅಲ್ಲಿಗೂ, ಕಾಳಿದಾಸ ೩೩೮ ಪ್ರತಿಗಳನ್ನು ಒಲೆ ಉರಿಸಲು ಉಪಯೋಗಿಸಿದ.

೪೦ನೆಯ ವರ್ಷ, ಕಾಳಿದಾಸ ಮತ್ತೆ ಶಕುಂತಲೆಯ ಕಥೆಯನ್ನು ಕೈಗೆ ತೆಗೆದುಕೊಂಡನಂತೆ. ಪತಿಸೇವೆಯೇ ಸತಿಗೆ ಮುಖ್ಯ ತಪಸ್ಸು, ಎಂದು ಕಣ್ವ ಮಹರ್ಷಿಗಳ ಬಾಯಿಂದ ಆ ಸಾಕು ಮಗಳಿಗೆ ಬೋಧಿಸಿದ; ದುಷ್ಯಂತನನ್ನು ಧರ್ಮ ಕರ್ಮಬದ್ಧನಾದ ಶುದ್ಧಾಚಾರ ಸಂಪನ್ನನಾಗಿ ಮಾರ್ಪಡಿಸಿದ. ಬಾಲಿಕಾಶ್ರಮದ ಪ್ರಕರಣಕ್ಕೆ ಬದಲಾಗಿ, ದೇವಲೋಕದ ಒಂದು ನಂದನವನ ಮಧ್ಯದ ಕುಟೀರವನ್ನು ಕಟ್ಟಿದ.... ಆಗ ಸಾಮಾನ್ಯ ಜನರಿಗೆ ತೀರ ಅಪ್ರಿಯವಾಯಿತು ಕಥೆ....ಕಾಳಿದಾಸನಿಗೆ ತುಂಬಾ

ನಷ್ಟ ಸಂಭವಿಸಿತು. ೧೩ ಸಾವಿರ ಓಲೆಗರಿ ಪ್ರತಿಗಳ ಪೈಕಿ, ೨೫೩೧ನ್ನು ಗೆದ್ದಲು ತಿಂದಿತು. ಅಮೃತಶಿಲಾ ಉಪ್ಪರಿಗೆ ಮನೆಯನ್ನು ಮಾರಿ, ಇಟ್ಟಿಗೆ ಗಾರೆ ಬಾಡಿಗೆ ಮನೆಗೆ ವರ್ಗಾಯಿಸಬೇಕಾಗಿ ಬಂತು.

ಅವನ ೬೦ನೆಯ ಹುಟ್ಟಿದ ಹಬ್ಬವನ್ನೂ, ಜನರು ಮರೆತರು. ಆದರೂ, ಪರಿಪಕ್ವವಾದ ಕಾಳಿದಾಸನ ಬುದ್ಧಿ ಶೀಲಗಳು ಅವನನ್ನು ಮತ್ತೆ ಶಕುಂತಲೆಯ ಕಥೆಯ ಕಡೆ ಸೆಳೆದುವು. ದುಷ್ಯಂತ ರಾಜನಾದ, ದೂರ್ವಾಸರ ಶಾಪ ಸೇರಿತು, ಋಷ್ಯಾಶ್ರಮ ಪಾವನಗೊಂಡಿತು, ಪ್ರೇಮ. ಶುದ್ಧವಾಯಿತು, ಬಹುಪತ್ನೀ ಪದ್ಧತಿ ರಾಜರ ವ್ರತವಾಯಿತು....ಐದನೆಯ ಪುನರ್ಲಿಪಿ ಕರಣದ ೧೫೦ ಪ್ರತಿಗಳು ಮಾತ್ರ ಮಾರಾಟವಾಯಿತು....ಬಾಡಿಗೆ ಬಾಕಿ, ಎಂಟು ತಿಂಗಳಿಗೇರಿತು!

೬೩ನೆಯ ವರ್ಷದಲ್ಲಿ, ಕಾಳಿದಾಸ ಕಟ್ಟಕಡೆಯ ಒಂದು ಪ್ರಯೋಗಕ್ಕೆ ಕೈ ಹಚ್ಚಿದ. ಕಥೆಯನ್ನು ನಾಟಕವಾಗಿ ರಚಿಸಿ, ರಾಯಲ್ಟಿ ಮೂಲಕ ಜೀವನ ನಡೆಸೋಣ ಅಂತ ಬಹಳ ಪ್ರಯತ್ನಪಟ್ಟ. ಆದರೆ, ಶಕುಂತಲೆಗೆ ಹುಟ್ಟಿದ್ದು ಗಂಡು ಮಗ, ಅಂತ ಬದಲಾಯಿಸಿದ್ದರಿಂದಲೂ, ಋಷ್ಯಾಶ್ರಮದ ಹುಡುಗಿಯರ ಸಾಮೂಹಿಕ ನೃತ್ಯ, ಮುಕ್ಕಾಲು ಬೆತ್ತಲೆಯಲ್ಲಾಗಬಾರದು ಎಂದು ಆತ ಹಟ ಹಿಡಿದಿದ್ದರಿಂದಲೂ, ಶ್ಲೋಕಗಳನ್ನು ಹಾಡುವಾಗ ಸಿನಿಮ ಟ್ಯೂನುಗಳನ್ನು ಅಳವಡಿಸಿಕೊಳ್ಳಕೂಡದೆಂದು ಒತ್ತಾಯಪಡಿಸಿದ್ದರಿಂದಲೂ, ನಾಟಕವಾಡಲೊಪ್ಪಿದ್ದ ಕಲಾವಿದರು, ಕೊನೆಯ ಗಳಿಗೆಯಲ್ಲಿ, ಚಕ್ಕರ್ ಕೊಟ್ಟೇಬಿಟ್ಟರು....ಅಂತ್ಯಕಾಲದಲ್ಲಿ ಅರಮನೆಯಿಂದ ಅಲ್ಪ ಸ್ವಲ್ಪ ಅಕ್ಕಿ ಬೇಳೆ ಲಭಿಸದಿದ್ದರೆ, ಕಾಳಿದಾಸನಿಗೆ, ಕಾಳಮ್ಮನ ಗುಡಿಯೇ ಆಸರೆಯಾಗುತ್ತಿತ್ತು....

ಹಣ ಸಂಪಾದಿಸುವ ಉತ್ತಮ ಬರವಣಿಗೋಪಾಯ ತಿಳಿದಿದ್ದರೂ, ಕಾಳಿದಾಸ ವಯಸ್ಸಾಗುತ್ತ ಅಗುತ್ತ, ಅರಳು ಮರುಳಾದದ್ದು,....ಅವನ ಹೆಂಡತಿ ಮಕ್ಕಳ ದುರ್ದೈವ!

ಹಲವು ಸಾಹಿತ್ಯೋಪಾಸಕರ....ಸುದೈವ.

—ಶ್ರೀ ಕಾಮತ್.

—o—

**ಹಿಂದೆ ಕೇಳಿದ್ದರೆ ಕ್ಷಮಿಸಿ—**

"ನಾಚಿಗ್ಗೇಡು ಅಂದ್ರೆ — ನಿನ್ನೆ ರಾತ್ರಿ ನೀವು ಬೀದೀಲಿ ದೀಪದ ಕಂಬಾನ ತಬ್ಬಿಕೊಂಡು ನಿಂತಿದ್ರಂತೆ—ಪಕ್ಕದಮನೆಯೋರು ಕರ್ಕೊಂಡು ಬಂದಾಗ ಪ್ರಜ್ಞೆಯೇ ಇರಲಿಲ್ಲ ..."

"ಅದಕ್ಕೇನಾಯ್ತೇ ಈಗ? ಒಂದು ದೀಪದಕಂಬದ ಮೇಲೆ ನಿಂಗೆ ಹೊಟ್ಟೆರಿ ನೇನೇ?

— ಕೇಫ.

## ವೋಟಿಗಾಗಿ

ಭಾಷಣವೆ ಭಾಷಣ! ಅದು ಭಾಷಣ!
ಭೀಮಪುರದಲಿ ನಾನಿತ್ತ....ಆ ಭಾಷಣ!

ಬೈದು ಕೆಡವಿದೆ ನಾನು, ಐದು ವರುಷದ ಹಿಂದೆ
ಐದು ಸಾವಿರ ಟೊಳ್ಳು ತಲೆಯ ಮುಂದೆ।
ಹಾಲು ಜೇನುಗಳನ್ನೆ ಹರಿಸಿದೆನು ಮಾತಿನಲಿ
ನಾಲಗೆಯ ಚಪ್ಪರಿಸಿ, ಜನ ಕೇಳಿತು।
ಬೆಲೆಗಳನು ತಗ್ಗಿಸಿದೆ, ಹೊಲಗಳನು ಸುಗ್ಗಿಸಿದೆ,
ಸಾಲಸೋಲಗಳಿನ್ನು ಇಲ್ಲವೆಂದೆ।
ಸಂಬಳವ ಹಿಗ್ಗಿಸಿದೆ, ಮಂಗಗಳ ಬಗ್ಗಿಸಿದೆ।
ಫೇಲಾದವರಿಗೆಲ್ಲ ಡಿಗ್ರಿ ಎಂದೆ।
ನರಿಗಳನು ದೂಷಣಿಸಿ ಕುರಿಗಳನು ಭೀಷಣಿಸಿ
ಘೋಷಣವ ಬೀರಿದೆನು ಅಂದು ನಾನು
ಏನು ಬೇಕೋ ನಿಮಗೆ ಅದ ಕೊಡುವೆ ನಿಮಗೆಂದೆ
ಸೋನೆ ಮಳೆಯುಂದದಾ ಮಾತಿನಲ್ಲಿ
ಪರಿಪರಿಯ ರೀತಿಯಲಿ ಕೂಗಿ ರೇಗಿದೆನಾಗ
ಉರಿಗಣ್ಣನುರುಳಿಸುತ ಸಭೆಯ ಕಡೆಗೆ
ಹಳ್ಳಿ ಹಳ್ಳಿಗು ಮುಂದೆ ಸಿನಿಮ ಎಂದೆ.

* * *

ಈಗ ಅವರ ಮುಂದೆ ನಾ ಹೇಗೆ ತಾನೇ ನಿಂತು
ಕೂಗು ಹಾಕಲಿ ಮತ್ತೆ ವೋಟಿಗಾಗಿ ?—

—ಕಾಮತ್.

## ಅಪ್ಪಾ ಸಾಧು !

ನನ್ದೂ ನಿನ್ದೇ
ನಿನ್ದೂ ನಿನ್ದೇ
ಅಂಬೋ ಮನ್ಸಾ ಸಾಧು—
ನನ್ದು ನನ್ದೇ
ನಿನ್ದೂ ನನ್ದೇ
ಅಂಬೋನ್ ಅಪ್ಪಾ ಸಾಧು !

—ಅಳ್ಳೀಗಮಾರ.

(ಯೆಲೂದ್ಯ ಜನಗೋಳ್
ಯೋಳೋ ಮಾತು ಸಾಮಿ!)

# ಪುರುಷರು!

---

ನಮ್ಮ ದೇಶ ಉದ್ಧಾರವಾಗುವುದು ಬಹಳ ಕಷ್ಟ! ಯಾವನಾದರೂ ಯಾವುದಾದರೊಂದು ವಿಷಯದಲ್ಲಿ ಆಸಕ್ತಿ ವಹಿಸಿ ಏನಾದರೊಂದು ಸಂಶೋಧನೆ ನಡೆಸಿ ಪ್ರಪಂಚಕ್ಕೆ ಒಂದು ವಿಜ್ಞಾನಯುತವಾದ ಅಭಿಪ್ರಾಯ ಕೊಡಲು ಮುಂದೆ ಬಂದರೆ-ಆತನಿಗೆ ನಾನಾ ಅಡಚಣೆಗಳು! ಫಿತೂರಿಗಳು!!

ನಾನು ಹಿಂದೆ ಒಂದು ಮಹತ್ತರವಾದ ಸಂಶೋಧನೆ ನಡೆಸಿ, ಇದೇ ಕಳೆದ ಅಕ್ಟೋಬರ್ ತಿಂಗಳಿನ 'ಕೊರವಂಜಿ'ಯಲ್ಲಿ "ಗುಜರಿ" ಎಂಬ ಶಿರೋನಾಮೆಯಲ್ಲಿ ಒಂದು ಲೇಖನ ಬರೆದಿದ್ದೆ. ಆ ಲೇಖನವನ್ನು ಓದಿದ್ದವರಿಗೆ ಜ್ಞಾಪಕವಿದ್ದರೂ ಇರಬಹುದು. ಆ ಲೇಖನದ ಪ್ರತಿಫಲವಾಗಿ ನನಗೆ ಇದುವರೆವಿಗೂ ನೂರಾರು ಪ್ರತಿಭಟನಾ ಪತ್ರಗಳು ಬಂದಿವೆ—ಮಹಿಳೆಯರಿಂದ. ಆ ಪತ್ರಗಳಲ್ಲಿ ಕೇವಲ ಎರಡು ಮಾತ್ರ ನನಗೇ ಬರೆದವು—ವೆಂಕು ಮತ್ತು ಕಿಟ್ಟಾಚಾರಿ—ಆಕೆ—ಗಳಿಂದ. ಮಿಕ್ಕ ಪತ್ರಗಳೆಲ್ಲ ನನ್ನಾಕೆಗೆ ಬರೆದವು. ಹಾಗೆ ಬರೆದಿದ್ದರೂ ನನ್ನ ಕೈಗೆ ಸೇರಿ ನಾನು ಮೊದಲು ಓದಿಕೊಳ್ಳಲೆಂದು ವಿಳಾಸ ಮಾತ್ರ—ನನ್ನ ಹೆಸರಿಗೆ ಬಂದವು.

ಎಲ್ಲ ಪತ್ರಗಳೂ ನನ್ನಮೇಲೆ ವಿಷ ಕಾರಿವೆ. ಎಲ್ಲ ಪತ್ರಗಳೂ ನನ್ನಾಕೆಗೆ ಸಹಾನುಭೂತಿ ತೋರಿಸಿವೆ. ಕೆಲವು ಪತ್ರಗಳಲ್ಲಿ—ನನ್ನಾಕೆ ನನಗೆ ಯಾವ ರೀತಿ ಯಾವ ವಿಧವಾದ ಪ್ರಾಯಶ್ಚಿತ್ತ ಕೊಡಬಹುದು—ಅನ್ನುವ ವಿಷಯದಲ್ಲಿ ಸಲಹೆಗಳನ್ನಿತ್ತಿವೆ. "ಘಾಡನಿದ್ರೆಯಲ್ಲಿದ್ದಾಗ ಕಿವಿಗೆ ಕುದಿಯುವ ಎಣ್ಣೆ ಬಿಡಿ" — "ಇನ್ನು ಮೇಲೆ ಲೇಖನ ಬರೆಯಲು ಕೂತರೆ ಮುಷ್ಕರ ಹೂಡಿ" — "ಇನ್ನುಮೇಲೆ ಒಂದು ತಮಿಳು ಚಿತ್ರವನ್ನೂ ಬಿಡದೆ ನೋಡಲೇಬೇಕೆಂದು ಹಠ ಹಿಡಿಯಿರಿ" — "ನಿಮ್ಮ ತಾಯಿ ತಂದೆ ಅಣ್ಣ ತಮ್ಮಂದಿರನ್ನು ನೋಡಬೇಕೆಂದೆನಿಸಿದಾಗ ತವರುಮನೆಗೆ ಇನ್ನು ಮೇಲೆ ಹೋಗಲೇಬೇಡಿ. ನಿಮ್ಮ ಇಡೀ 'ಗ್ಯಾಂಗ್'ನ ನಿಮ್ಮಲ್ಲಿಗೆ ಕರಿಸಿ ಮೂರು ತಿಂಗಳಾದರೂ ಝಾಂಡಾ ಊರಿಸಿ"—ಇಂಥವೇ ಸಲಹೆಗಳು.

ಒಬ್ಬ ಮಹಿಳೆ—'ಫಿಯರ್‌ಲೆಸ್‌ನಾಡಿಯಾ'—ಅಂತ ಸಹಿ ಹಾಕಿದ್ದಾಳೆ—ಹಿಂದೂ ವಿವಾಹವಿಚ್ಛೇದನ ಕ್ರಮವನ್ನು ಕ್ರಮವಾಗಿ ವರ್ಣಿಸಿ ಕಾಗದ ಬರೆದಿದ್ದಾಳೆ.

ಆದರೂ ಅನೇಕ ಪತ್ರಗಳು ವಿಚಾರ ಪೂರ್ಣವಾಗಿವೆ ಎಂದು ಒಪ್ಪಬೇಕು. ಮನುಷ್ಯರ ಗುಣಗಳನ್ನು ಎತ್ತಿ ಹಿಡಿದು ಬಡಿದು ಒಡೆದು ನುಚ್ಚುನೂರು ಮಾಡಿ

ಚೆಲ್ಲಾಪಿಲ್ಲಿ ಮಾಡಿವೆ. ತಾವು ಗುಜರಿ ಮಾಲಿಕೆಯರೆಂದು ಯಾವೊಬ್ಬಾಕೆಯೂ ಒಪ್ಪಿಲ್ಲ. ನಿಜವಾದ ಗುಜರಿದಾರರೆಂದರೆ—ಗಂಡಸರೇ ಅಂತ ಎಲ್ಲರೂ ಸಾರಿದ್ದಾರೆ.

ಒಬ್ಬಾಕೆ — 'ಝಾನ್ಸೀಕಿರಾಣಿ' ಅಂತ ಸಹಿ ಹಾಕಿದ್ದಾರೆ — "ನಮ್ಮ ಯಜಮಾನರ ಜೇಬಿನಲ್ಲಿ ಯಾವಕಾಲದಲ್ಲಿಯೇ ಆಗಲಿ ಬೇಕಾದ ಸಾಮಾನೊಂದನ್ನು ಬಿಟ್ಟು ಏನು ಬೇಕಾದರೂ ಸಿಗುತ್ತದೆ. ನನಗೇ ಎಷ್ಟೋಬಾರಿ— ದುಡ್ಡು ಹುಡುಕುಕ್ಕೆ ಅವರ ಜೇಬಿನಲ್ಲಿ ಕೈಹಾಕಿದಾಗ ಹಳೇ ಬ್ಲೇಡಿನಿಂದ ಕೈ ಕತ್ತರಿಸಿದೆ. ಖಾಲಿ ಸಿಗರೇಟ್ ಪ್ಯಾಕುಗಳು, ಖಾಲಿ ಬೆಂಕಿಪಟ್ಟಣಗಳು, ನಾನು ನನ್ನ ತಾಯಿಗೆ ಬರೆದುಕೊಟ್ಟು ಪೋಸ್ಟಿಗೆ ಹಾಕಬೇಕಾದ ಕಾಗದಗಳು ಸಿಕ್ಕಿವೆ. ಒಂದು ಬಿಡಿಕಾಸು ಇದುವರಿವಿಗೂ ಸಿಕ್ಕಿಲ್ಲ" ಅಂತ ಬರೆದಿದ್ದಾರೆ.

ಮತ್ತೊಬ್ಬ ಮಹಿಳೆ—'ಗಂಡಸ್ಕತ್ರಿ' (ಕೈಲಾಸಂರವರ ಆತ್ಮಕ್ಕೆ ಶಾಂತಿಯಿರಲಿ) —ಅಂತ ಸಹಿಮಾಡಿ—"ಅಕಸ್ಮಾತ್ ನಮ್ಮ ಯಜಮಾನರು ಒಂದು ಹೊತ್ತಿನ ಮಟ್ಟಿಗೆ ಒಂದು ಲೋಟ ನೀರುಮಜ್ಜಿಗೆ ಬೆರೆಸಿದರೆ—ನಮ್ಮ ಮನೆಯನ್ನು ನೋಡ ಬಹುದೆ? ಒಂದು ಭಾರಿ ಭೂಕಂಪವಾದ ಹಾಗಿರುತ್ತೆ. ಹೈಡ್ರೋಜನ್ ಬಾಂಬ್ ನಮ್ಮ ಮನೆಯಲ್ಲೇ ಸಿಡಿದ ಹಾಗಿರುತ್ತೆ" ಅಂತ ದೂರಿ ಬರೆದಿದ್ದಾರೆ.

'ನರ್ಗಿಸ್‌ಕುಮಾರಿ'—ಅನ್ನುವಾಕೆ ಬರೆದಿದ್ದಾರೆ—"ಗುಜರಿ—ಎಂಬ ಶಿರೋನಾಮೆಯಲ್ಲಿ ಅಡಿಗೆಯ ಮನೆ ವರ್ಣಿಸಿದಾತ ಒಂದು ದಿನ ನಮ್ಮ ಯಜಮಾನರು ಅಡಿಗೆ ಮಾಡಿದ ವೈಖರಿ ನೋಡಿದ್ದರೆ ಚೆನ್ನಾಗಿತ್ತು. ಅಥವಾ ತಿಂದಿದ್ದರೆ ಮತ್ತೂ ಚೆನ್ನಾಗಿತ್ತು. ತೊಗರಿಬೇಳೆಯಲ್ಲಿ ಅನ್ನ ಮಾಡಿ ಅಕ್ಕಿಯಲ್ಲಿ ಸಾರು ಮಾಡಿ ತಾವು ಹೊಟ್ಟೇನೋವು ಅಂತ ಊಟಮಾಡದೆ ಹೋಟಲಿಗೆ ಹೊರಟುಹೋದರು" ಅಂತ.

ಹೀಗೆ ಹೇಳುತ್ತ ಹೋದರೆ—ಮೂರು ತಿಂಗಳ ಕೊರವಂಜಿಯ ಒಟ್ಟು 144 ಪುಟಗಳು ನನಗೆ ಸಾಲವು. ಆದರೂ ಮೇಲೆ ಹೇಳಿರುವ ತಪ್ಪುಗಳಿಗಿಂತ, ಪುರುಷರಲ್ಲಿ ಕಂಡುಬರುವ ಕೆಲವು ಮೂಲ ತಪ್ಪುಗಳನ್ನು ಆ ಮಹಿಳೆಯರು ಸೂಚಿಸಿದ್ದಾರೆ. ಅವೆಲ್ಲವೂ ಆರೋಪಣೆಗಳ ಮಾದರಿಯಲ್ಲಿಯೇ ಇವೆ. ಅವುಗಳನ್ನು ಸಂಕ್ಷೇಪವಾಗಿ ಕೆಳಗೆ ಕೊಟ್ಟಿದ್ದೇನೆ. ಜೊತೆಗೆ ನನ್ನ ಆಪ್ತಮಿತ್ರರ (ಪುರುಷರ) ಪ್ರತ್ಯುತ್ತರವನ್ನೂ ಕೊಟ್ಟಿದ್ದೇನೆ. ಬೇರೆಯವರ ಅಭಿಪ್ರಾಯಗಳಿಗೆ ನನ್ನ ಸಮ್ಮತಿ ಇದ್ದರೂ ಇರಬಹುದು — ಇರದಿರಲೂಬಹುದು.

(1) "ಪುರುಷರು ಕಾಡುಜನರು, ಸಮಾಜದಲ್ಲಿ–ಸಂಸಾರದಲ್ಲಿ ಹೇಗೆ ನಡೆದು ಕೊಳ್ಳಬೇಕೆಂದು ಗೊತ್ತಿಲ್ಲ. ತಿಂಡಿ ತಿನ್ನುವಾಗ, ಊಟ ಮಾಡುವಾಗ, ಅಥವಾ ಏನಾದರೊಂದು ವಿಷಯ ಮಾತನಾಡಬೇಕಾದಾಗ— ಯಾವುದಾದರೊಂದು ಪತ್ರಿಕೆ

ಅಥವಾ ಪುಸ್ತಕ ಕೈಯಲ್ಲಿಟ್ಟುಕೊಂಡು ಪ್ರಪಂಚವನ್ನೇ ಮರೆಯುವ ಕೆಟ್ಟ ಅಭ್ಯಾಸದವರು"—

ಒಪ್ಪಿದೆ. ಮನೆಯಲ್ಲಿ ಬೇಯಿಸಿದ್ದನ್ನು ಮರುಮಾತನಾಡದೆ ತಿನ್ನಬೇಕಾದರೆ, ಮನಸ್ಸು ಯಾವುದಾದರೊಂದು ಬೇರೆ ವಿಚಾರದಲ್ಲಿ ಮಗ್ನವಾಗಿರುವುದೇ ಕ್ಷೇಮ. ಇಲ್ಲದಿದ್ದರೆ ಪದಾರ್ಥಗಳ ರುಚಿ ತಿಳಿದೀತು. ಹಾಗೂ—ಪುರುಷರಿಗೆ ಎದುರುಮನೆ ಗಂಗೂಬಾಯಿಯ ಸೀರೆಯ ಬಣ್ಣವಾಗಲಿ, ಗಂಗಾಧರರಾಯನ ಕೆಟ್ಟಚಾಳಿಯ ವಿಷಯವಾಗಲಿ ಬೇಕಿಲ್ಲ.

(2) ಪುರುಷರು ಗುಬ್ಬಚ್ಚಿ ಹೃದಯದವರು. ಮತ್ತ್ಯಾರಿಗಾದರೂ ಸ್ವಾಸ್ಥ್ಯವಿಲ್ಲದಾಗ ವಿಪರೀತ ಧೈರ್ಯ ಹೇಳುತ್ತಾರೆ. ತಮ್ಮ ಉಸಿರು ತುಸ ಬಿಸಿಯಾದರೂ ನೂರೆಂಟು ಡಾಕ್ಟರು, ಸಾವಿರಾರು ಪಥ್ಯಗಳು ಬೇಕು.

—ಹೀಗೆ ಮಾಡದಿದ್ದಲ್ಲಿ ವಿಧಿಯಿಲ್ಲ. ತಮ್ಮ ಜೀವವಿಮೆ ಚಾಲ್ತಿಯಲ್ಲಿರುವುದು ಅಪುರೂಪ. ಆದ್ದರಿಂದ ನಂಬಿದವರನ್ನು ನಡುನೀರಲ್ಲಿ ಬಿಡಬಾರದೆಂಬ ಒಂದೇ ಯೋಚನೆಯಿಂದ ಪುರುಷರು ಹೀಗೆ ಮಾಡುತ್ತಾರೆ.

(3) ಸ್ತ್ರೀಯರಿಲ್ಲದಿದ್ದರೆ ಪುರುಷರ ಕೈಲಿ ಯಾವ ಕೆಲಸವೂ ಆಗದು—ಕಡೆಗೆ ತಮ್ಮ ಅಂಗಿಗೆ ಒಂದು ಗುಂಡಿಯನ್ನು ಕೂಡ ಹೊಲಿದುಕೊಳ್ಳಲಾರರು"

—ಇದಕ್ಕೆ ರಾಜ ಒಂದೇ ಪ್ರಶ್ನೆ ಕೇಳುತ್ತಾನೆ—"ದರ್ಜಿಗಳು ಪುರುಷರೇ—ಮಹಿಳೆಯರೇ?"

(4) "ಪುರುಷರಿಗೆ ಸ್ತ್ರೀಯರಿಗಿದ್ದಷ್ಟು ಜ್ಞಾಪಕಶಕ್ತಿಯಿಲ್ಲ"

—ಹೌದು. ಯುಗಾದಿಹಬ್ಬಕ್ಕೆ ಹೊಸ ಸೀರೆ ಕೊಳ್ಳುತ್ತೇನೆಂದು ಹೇಳಿದುದನ್ನು ಆತ ಮರೆಯಬಹುದು. ಆದರೂ ಬಾಧಕವಿಲ್ಲ. ಆತ ತಪ್ಪಿಸಿಕೊಳ್ಳಲಾರ.

(5) "ಪುರುಷರು ಮಂಕುದಿಣ್ಣೆಗಳು—ಲೆಕ್ಕಾಚಾರ ಸುತರಾಂ ತಿಳೀದು. ನಾನು ದಸರಾದಲ್ಲಿ ಮೈಸೂರಿಗೆ ಹೋಗೋಣಾಂದ್ರೆ—'ದುಡ್ಡೆಲ್ಲಿದೆ' —ಅಂತಾರೆ. ಹೋಗಲಿಬಿಡಿ ಒಂದು ರೇಷ್ಮೆಸೀರೆ ತನ್ನಿ —ಅಂದರೆ—'ಅದಕ್ಕೂ ದುಡ್ಡೆಲ್ಲಿದೆ?'—ಅಂತಾರೆ. ದಸರಾಕ್ಕೆ ಮೈಸೂರಿಗೆ ಹೋಗದೆ ಇದ್ದಿದ್ದರಿಂದ ಮಿಗೋ ದುಡ್ಡಿನಲ್ಲಿ ಸೀರೆ ತನ್ನಿ ಅಂದರೆ—ಆ ಲೆಕ್ಕ ತಿಳೀದೆ ಕಕ್ಕಾಬಿಕ್ಕಿ ನೋಡ್ತಾರೆ"

—ಇದಕ್ಕೆ ಚಂದಿಯ ಟೀಕೆ—"ಟಿ.ಟಿ.ಕೆ.—ಬೇಸ್ತು!"

(6) "ಪುರುಷರಿಗೆ—ಬೇರೆ ಜನರೊಂದಿಗೆ ಮಾತನಾಡುವಾಗ ಇರುವ ಸಹನೆ ಮನೆಯವರೊಂದಿಗೆ ಮಾತನಾಡುವಾಗ ಇರುವುದಿಲ್ಲ"

—ಇದಕ್ಕೆ ಯೆಂಕು ಹೇಳ್ತಾನೆ—ನಾವು ಬೇರೆಯವರನ್ನು ಒಂದು ದಿನದಲ್ಲಿ ಕೇವಲ ಕೆಲವೇ ನಿಮಿಷಗಳು ಭೇಟಿಮಾಡುತ್ತೇವೆ. ಅಷ್ಟರಲ್ಲಿ ಅವರು—ನಾವೆಲ್ಲಿ ಹೋಗುತ್ತೇವೆ, ಎಷ್ಟೊತ್ತಿಗೆ ಬರುತ್ತೇವೆ—ಅಂತ ಕೇಳೊಲ್ಲ (ಸಾಲ ತೆಗೆದುಕೊಂಡವರನ್ನು ಬಿಟ್ಟು). ಅದೂ ಅಲ್ಲದೆ—ಈ ಅಣುಯುಗದಲ್ಲಿ ಯಾವ ಕಾರ್ಯನಿರತ ಪುರುಷನಿಗೂ ಯಾರೊಂದಿಗೂ 10 ನಿಮಿಷಗಳಮೇಲೆ ಸಹನೆಯಿಂದ ವರ್ತಿಸಲು ಸಾಧ್ಯವೇ ಇಲ್ಲ.

ಮಿಕ್ಕ ಪತ್ರಗಳೆಲ್ಲಾ ಮೇಲೆ ಹೇಳಿದ ಅಂಶಗಳನ್ನೇ ಹೆಚ್ಚು ಕಮ್ಮಿ, ಒಂದಲ್ಲ ಒಂದು ರೀತಿಯಲ್ಲಿ ಅನುಮೋದಿಸಿವೆ. ಅಂತೂ ಈ ವಿಚಾರವನ್ನು ಮರೆಮಾಚದೆ ವಾಚಕರ ಮುಂದೆ ಇಟ್ಟಿದ್ದೇನೆ. ಯಾವ ಭಿನ್ನಾಭಿಪ್ರಾಯಗಳಿಗೂ ನಮ್ಮನ್ನೆ ಕೆಳಿಯದೇ ತಾವೇ ತಮ್ಮ ನಡತೆಯನ್ನು ಸರಿಪಡಿಸಿಕೊಳ್ಳಬೇಕು. ನಮ್ಮ ಅಭಿಪ್ರಾಯ ಕೇಳುವುದಾದರೆ—ನಾವು ಹೇಳುವುದಿಷ್ಟೆ—ಈಗ ಪ್ರಪಂಚದಲ್ಲಿ ಸಿಗುವ ಪುರುಷರಿಗಿಂತಲೂ ಉತ್ತಮವಾದ ಪುರುಷರನ್ನು ನಿರ್ಮಾಣಮಾಡಲು ಯಾವ ದೇವರಿಂದಲೂ ಸಾಧ್ಯವಿಲ್ಲ. ಒಂದುವೇಳೆ ಮಹಿಳೆಯರು ಹಠ ಹಿಡಿದಿದ್ದೇ ಆದರೆ-ಆತ ಪುರುಷರ ನಿರ್ಮಾಣ ಕಾರ್ಯವನ್ನೇ ನಿಲ್ಲಿಸಿಬಿಟ್ಟಾನು! ಆಗ? ಒಟ್ಟಿನಲ್ಲಿ—ನಮ್ಮ ಚಂದಿ ಹೇಳೋಹಾಗೆ—ಗಂಡಂದಿರಿದ್ದರೆ ತಾನೇ ಹೆಂಡ....I mean—ಪತಿಗಳಿದ್ದರೆ ತಾನೆ ಪತ್ನಿಯರು?

— ಕೇಫ.



ಎರಡನೇ ಪಾಂಚವಾರ್ಷಿಕ ಯೋಜನೆಯಲ್ಲಿ ಎಂಜಲೆಲೆಯಲ್ಲಿ ಅಗಳು ಸಿಗಬಹುದು ಕಣೋ!

# ಹಳೇ ಅಪರಾಧಿಯ ಹೊಸ ಹಾಡು

(ಮೌನವಾಗಿ ಹಾಡಿಕೊಳ್ಳಬೇಕಾದುದು)

---

ಕನ್ನಡವನುಳಿದೆನಗೆ ಅನ್ಯ ಜೀವನವಿಲ್ಲ
ಕನ್ನಡವೆ ಎನ್ನ ಸಿರು, ಅದೆ ಕಾಮಧೇನು!
(ಕನ್ನಡದೊಳೇನಿಹುದು ಎಂದೊಮ್ಮೆ ಜರೆದಿದ್ದೆ
ಕನ್ನಡವೆ ಎಮಗಿಂದು ಗತಿಯಾಯಿತಲ್ಲ!)

ಆಡದೆಯೆ ಬಿಟ್ಟಿದ್ದ ಕನ್ನಡವೆ ಸವಿನುಡಿಯು
ಕನ್ನಡ ಸರಸ್ವತಿಯೆ ಎನಗಿನ್ನು ಗತಿಯು!
(ಕನ್ನಡದ ಗೀತೆಗಳ ಕಿವಿಮುಚ್ಚಿ ಕೇಳಿದ್ದೆ
'ಉದಯವಾಯಿತು' ಇಂದು ಹಾಡಬೇಕಲ್ಲ!)

ಬಿಟ್ಟೆ, ಆಂಗ್ಲವ ಬಿಟ್ಟೆ, ಬೇರೆಲ್ಲವನು ಬಿಟ್ಟೆ
ಕನ್ನಡದಿ ಭಾಷಣವ ಬಿಗಿಯೆ ಪಣತೊಟ್ಟೆ!
('ಕ್ಷಮಿಸಿ, ಕನ್ನಡ ಬರದು' ಎಂಬುದೆನಗಭ್ಯಾಸ!
ಭಾಷಣಕೆ ಟ್ಯೂಶನ್ನು ಬೇಕಾಯಿತಲ್ಲ!)

ಕನ್ನಡವ ನಂಬಿದರೆ ಇನ್ನು ವರಮಾನ
ಅರಿಯೆ ಕನ್ನಡವೆಂದರವಮಾನ
(ಪ್ರತಿಯೊಂದು ನಾಯಿಗೂ ಅದರ ದಿನ ಉಂಟು
ಅಂತೆಯೇ ಕನ್ನಡಕು ಕಾಲ ಬಂತು)

ಕನ್ನಡದ ಜಪವಿನ್ನು ಪರಮ ಮಂತ್ರ
ಅದ ಜಪಿಸಿ ಬಾಳುವುದೆ ಎನ್ನ ತಂತ್ರ!
ಕನ್ನಡವು ಗೆದ್ದಿತೆ? ಇಗೊ ಹಿಡಿದೆ ಬಾಲ!
ಲಾಭವೇನಿದೆ ಬರಲಿ, ಕೊಡಿ ನನಗೆ ಪಾಲ!

(ಬೆನಗಲ್‌ರವರಿಗೆ ನಮೋ ಎಂದು)

— ರಾಮಿ.

# ನ್ಯಾಯಾಸ್ಥಾನದ ತಕ್ಲೀಫು

ಎಷ್ಟೋ ಬಾರಿ ಅರಿಯದವರು ಕೇಳಿಕೊಂಡರು, ನಮ್ಮ ಹಿರಿಮಂಕೂರಿನಲ್ಲೂ ಕೂಡ ತಿಂಗಳಿಗೆ ಒಂದೇ ಬಾರಿಯಾದರೂ ನ್ಯಾಯಸ್ಥಾನದ ವಿಚಾರಣೆಗಳು ನಡೆಯಲಿ ಎಂದು. ಆದರೆ ನಮ್ಮೂರಿನ ಮೇಲೆ ಅಷ್ಟಾಗಿ ಕರುಣೆ ಬರಲಿಲ್ಲ ಮೇಲಿನವರಿಗೆ. ಆದ್ದರಿಂದ ತಿಂಗಳಿಗೊಮ್ಮೆ ನಾವೆಲ್ಲರೂ ಅರುವತ್ತು ಮೈಲಿ ಆಚೆಯ ಊರಿಗೆ ಹೋಗ ಬೇಕಾಗಿತ್ತು.

ಪೋಲೀಸ್ ಮುಖ್ಯಸ್ಥ, ಅವನ ಸಿಬ್ಬಂದಿ, ಆಸ್ಪತ್ರೆಯ ವಾರ್ಡ್ ಬಾಯ್, ಸೇವಾದಳದ ಕಾರ್ಯವಾಹ, ಸಂಗೀತ ಸಮಾಜದ ಡಾ|| ಅಧ್ಯಕ್ಷ, ಹೈಸ್ಕೂಲಿನ ಸಂಸ್ಕೃತ ಮಾಸ್ತರು, ಇಷ್ಟು ಜನರೂ ಹೇಗಾದರೂ ಮಾಡಿ, ಆ ಮೊಕದ್ದಮೆಗಳಲ್ಲಿ ಸಾಕ್ಷಿಗಳಾಗಿ ಕರೆಸಿಕೊಳ್ಳಲ್ಪಡುತ್ತಿದ್ದರು. ಅವರೆಲ್ಲರಿಗೂ ರಾಜಧಾನಿಯಲ್ಲಿ ಹತ್ತಿರದ ಸಂಬಂಧೀಕರಿದ್ದಾರೆ. ಇವರೆಲ್ಲರೂ ಪೋಲೀಸ್ ವ್ಯಾನಿನಲ್ಲಿ, ಅಪರಾಧಿಗಳೊಡನೆ ಧಾತ್ರೀಹವನಕ್ಕೆ ಹೋಗುವ ಸಂಭ್ರಮದಿಂದ, ತಿಂಗಳಿಗೊಮ್ಮೆ ಈ ರೀತಿಯ ಮಜಾ ಏರ್ಪಾಡನ್ನು ಮಾಡಿಕೊಂಡಿದ್ದರು. ಒಂದು ವಾರದ ಕಾಲ ಹಿಂತಿರುಗಿ ಬರುತ್ತಿರಲಿಲ್ಲ. ಹಿಂತಿರುಗಿ ಬಂದಾಗ, ಕಾಯಕಲ್ಪವನ್ನೇ ಮಾಡಿಕೊಂಡು ಬಂದವರಂತೆ ಎಲ್ಲರೂ ಮಸ್ತಿಯಿಂದಲೇ ಶೋಭಿಸುತ್ತಿದ್ದರು.

ಆದರೆ ಅರಿಯದವರ ಅಹವಾಲುಗಳು ಹೆಚ್ಚಾದ ಕಾರಣ ಈಗ ನ್ಯಾಯಾಸ್ಥಾನವು ಎರಡು ತಿಂಗಳಿಗೊಮ್ಮೆ ನಮ್ಮೂರಿನಲ್ಲಿ ಕೆಲಸ ಮಾಡಬೇಕೆಂದು, ನಮ್ಮ ಕೇಂದ್ರದ ನವಾಬರು ಆಣತಿಯನ್ನು ಇತ್ತೇಬಿಟ್ಟರು.

ಬರುವ ಹಿರಿಯ ನ್ಯಾಯಾಧೀಶರಿಗೆ ಈಗ ನಾವು ಅನುಕೂಲವಾದ ಮನೆಯ ಏರ್ಪಾಡನ್ನು ಮಾಡಬೇಕಾಗಿ ಬಂದಿತು.

ಮೊಯ್ಯದೀನನು ನಮ್ಮೂರಿನ ಶಿಲ್ಪಿಶಾಸ್ತ್ರಿ. ಯಾವ ಮನೆಗೆ ಸೂರು ಹಾಕ ಬೇಕಾಗಲೀ, ಯಾವ ಬಾಗಿಲನ್ನು ಮುಚ್ಚಬೇಕಾಗಲೀ, ಯಾವ ಮಂಚವನ್ನು ದುರಸ್ತುಮಾಡಬೇಕಾಗಲೀ, ಮರದ ಕೆಲಸವೇನೇ ಇದ್ದರೂ ಮೊಯ್ಯದೀನನೇ ಗತಿ. ಮರಕೆಲಸದ ಮಂತ್ರಿ ಅವನಾದರೂ, ಗಾರೆ ಕೆಲಸಕ್ಕೂ ಅವನೇ ಅಧಿಪತಿ. ನಮ್ಮ ಛತ್ರಿ ಕಚ್ಚಿಕೊಂಡರೆ, ಅವನೇ ಅದಕ್ಕೆ ಡಾಕ್ಟರು. ನಮ್ಮೂರ ಖಜಾನೆಯ ಪೆಠಾರಿಯ

ಬೀಗದ ಕೈ ಕಳೆದುಹೋದರೆ, ಅವನೇ ಇನ್ನೊಂದನ್ನು ನಿರ್ಮಿಸಿ ಖಜಾನೆಯ ಲೇವಾ ದೇವಿಗೆ ಆಸರೆಯಾಗುವನು. ನೆರೆಯೂರಿಗೆ ಬಂದಿದ್ದ ಸರ್ಕಸ್ಸಿನ ಸಿಂಹವೊಂದು ನಮ್ಮೂರಿಗೆ ತಪ್ಪಿಸಿಕೊಂಡು ಬಂದಾಗ, ಕೈಲಿದ್ದ ತಂತಿಯನ್ನೇ ಆ ಸಿಂಹದ ಬಾಯಿಗೆ ಬಾಯಿಬೀಗ ಹಾಕಿ, ಬಾಲವನ್ನು ಹಿಡಿದುಕೊಂಡು, ಸರ್ಕಸ್ಸಿನ ಕಂಪೆನಿಯವರಿಗೆ ಸುರಕ್ಷಿತವಾಗಿ ತಲುಪಿಸಿದ್ದ. ಕೃತಜ್ಞತೆಯಿಂದ ಏನು ಬೇಕು ಬಹುಮಾನ ಎಂದು ಕೇಳಿದಾಗ, ನಿಮ್ಮ ಕತ್ತಿಯವರಸೆಯವನ ಕೈಲಿ ನನ್ನ ತಲೆಯನ್ನು ನುಣ್ಣಗೆ ಬೋಳಿಸ ಬೇಕು ಎಂದು ಬೇಡಿಕೊಂಡಿದ್ದ. ಮೊಯ್ಯುದೀನನು ಅಚ್ಛನ್ನ ಮಾಪ್ಲಾ.

ನ್ಯಾಯಾಧೀಶರ ಪ್ರವಾಸ ಗೃಹವನ್ನು ಕಟ್ಟಲು, ಮೊಯ್ಯುದೀನನು ನೇಮಿತ ವಾದುದು ಸಹಜವಲ್ಲವೇ!

ನ್ಯಾಯಾಧೀಶರು ನಮ್ಮೂರಿಗೆ ಬರಬೇಕಾದ ಹದಿನೈದು ದಿನಗಳ ಮುಂಚೆಯೇ ಮಂದಿರವು ಸಿದ್ಧಗೊಳಿಸಲ್ಪಟ್ಟಿತು. ಊರ ಹಿರಿಯರಾದ ನಮ್ಮನ್ನು ಅಲ್ಲಿಗೆ ಮೊಯ್ಯು ದೀನನು ಗೃಹಪ್ರವೇಶದ ಸಲುವಾಗಿ ಕರೆದೊಯ್ದ. ನಮ್ಮಲ್ಲಿ ಕುಂಜಾಮುದ್ದನೂ ಬಂದಿದ್ದ. ಕುಂಜಾಮುದ್ದನು ಮೊಯ್ಯುದೀನನ ನೆರೆಯವ. ಮಂದಿರವನ್ನು ಒಳ ಹೊಕ್ಕು, ಮೊಯ್ಯುದೀನನು ಕೊಟ್ಟ ಪಲಾವನ್ನು ತಿಂದಾಗ, ಕುಂಜಾಮುದ್ದನು ಸ್ವಲ್ಪ ರೇಗಿದಂತೆ ಕಾಣಿಸಿತು. ಕೋಳಿ ಪಲಾವು ಬಲು ಬಲು ರುಚಿಯಾಗಿತ್ತಾದರೂ, ಕುಂಜಾಮುದ್ದನಿಗೆ ಕೋಪವೇಕೇ? ಅವನನ್ನು ಕೇಳೋಣ ಎನ್ನುವಷ್ಟರಲ್ಲೇ ಅವ ಹೊರಗೆ ಹೋಗಿದ್ದ. ನಾವೆಲ್ಲಾ ತಿಂದು ಹೊರಕ್ಕೆ ಬರುವ ಹೊತ್ತಿಗೆ ಏದುಸಿರು ಬಿಡುತ್ತಾ ಕುಂಜಾಮುದ್ದನು ಬಂದ. ಬಾಗಿಲಲ್ಲಿ ನಿಂತಿದ್ದ ಮೊಯುದ್ದೀನನನ್ನು "ನ್ಯಾಯಾಧೀಶರೆಲ್ಲಾ ಕಂಚಿಯಿಂದಲೇ ಬರುತ್ತಾರೆಯೇ? ಐದಡಿಗಿಂತ ಕುಳ್ಳೇ ಆಗಿರುತ್ತಾರೆಯೇ, ಈ ಬಾಗಿಲು ಅವರ ಎತ್ತರಕ್ಕೇ ಸಾಕೇ" ಎಂದು ಕುಹಕದಿಂದ ಕೇಳಿದ. ನನ್ನ ಕಿವಿಯಿಲ್ಲಿ "ನಮ್ಮ ಮನೆ ಕೋಳಿಯನ್ನೇ ಮೊಯ್ಯುದೀನನು ಲಪಟಾಯಿಸಿ ಪಲಾವು ಮಾಡಿದ್ದಾನೆ, ಮೊದಲ ತುತ್ತಿಗೇ ಗೊತ್ತಾಯಿತು. ನಿರ್ಧರ ಮಾಡೋಣವೆಂದು ಮನೆಗೆ ಓಡಿಹೋಗಿ ಕೋಳಿ ಲೆಕ್ಕ ತೆಗೆದುಕೊಂಡು ಬಂದೆ" ಎಂದು ಹೇಳಿದ. ಇದನ್ನು ಕೇಳಿದ ಮೊಯ್ಯುದೀನನು ಮಾತನಾಡಲಾರದೆ ಕೈಲಿದ್ದ ಉಳಿಯಿಂದ ಕುಂಜಾಮುದ್ದನ ತಲೆಯನ್ನು ಕುಟ್ಟಿದ. ಕುಂಜಾಮುದ್ದನು ಮೂರ್ಛೆ ಹೋದ. ಮೊಯ್ಯುದ್ದೀನನನ್ನು 'ಅರೆಸ್ಟ್' ಮಾಡಿದೆವು. ಜಾಮೀನಿನ ಮೇಲೆ ಬಿಡುಗಡೆಯಾದ.

ಇದೇ ಮೊಕದ್ದಮೆಯೇ ನಮ್ಮೂರಿನಲ್ಲಿ ನಡೆಯುವ ಕೋರ್ಟಿನ ಮೊದಲ ನೆಯದು.

ಆದರೆ ಆಶ್ಚರ್ಯ!!

ನ್ಯಾಯಮೂರ್ತಿಗಳು ಬಂದಾಗ, ಅವರ ಮೋಟಾರಿನ ಹಿಂಬದಿಯಲ್ಲೇ ಮೊಯ್ಯುದೀನ್ ಕೂತಿದ್ದಾನೆ. "ಇಲ್ಲಿಗೆ ಬರುವಾಗ ಮೋಟಾರು, ಪಾಪನಾಶಿನಿಯನ್ನು ದಾಟುವಾಗ ಹೂತುಹೋಯ್ತು, ಇವ ಅಲ್ಲಿಲ್ಲದಿದ್ದರೆ, ನಾನೂ ಇರುತ್ತಿರಲಿಲ್ಲ. ಇವನೇ ನನ್ನ ಪ್ರಾಣದಾತ. ಇವನ ತಲೆಯನ್ನು ಸರ್ಕಸ್ಸಿನವರು ಕತ್ತಿಯಿಂದ ಬೋಳಿಸಿದ್ದರಂತೆ. ಅದನ್ನು ನೆನೆದು ಇವ ಯಾರದೋ ತಲೆಯನ್ನು ಉಳಿಯಿಂದ ತೋಪುಮಾಡಲೆತ್ನಿಸಿದಾಗ ಅವ ಅಲ್ಲಾಡಿ ಅಪಘಾತವಾಯ್ತಂತೆ. ಆ ಮೊಕದ್ದಮೆಯೂ ಇಲ್ಲಿದೆಯಂತೆ" ಎಂದರು.

"ತಿರುಗಿ ಪಾಪನಾಶಿನಿಯಲ್ಲಿ ಪ್ರವಾಹ ಬರುತ್ತದಂತೆ. ಆದುದರಿಂದ ಇಲ್ಲಿಂದ ಈಗಲೇ ಕೋರ್ಟು ನಡೆಸಿ, ಸಂಜೆಗೆ ನಾನು ಹಿಂತಿರುಗುತ್ತೇನೆ" ಎಂದು ಹೇಳಿದರು.

ಆರು ಮೊಕದ್ದಮೆಗಳನ್ನು ಅರ್ಧ ಗಂಟೆಯಲ್ಲಿ ಮುಗಿಸಿ, ಅಪರಾಧಿಗಳೆಲ್ಲರನ್ನೂ ಸಾಕಷ್ಟು ರುಜುವಾತಿಲ್ಲವೆಂದು ಖುಲಾಸೆಮಾಡಿ, ಮೋಟಾರಿನಲ್ಲೇ ನಾವಿತ್ತ ಎಳನೀರನ್ನು ಕುಡಿದು, ಮೊಯ್ಯುದೀನನನ್ನು ಬೆಂಗಾವಲಿಗೆ ಕರೆದುಕೊಂಡು ನ್ಯಾಯಮೂರ್ತಿಗಳು ಹಗಲಲ್ಲೇ ಹಿಂತಿರುಗಿದರು.

ಇನ್ನು ಮೇಲೆ ಈ ಊರಲ್ಲಿ ಕೋರ್ಟು ಬೇಡ ಎಂದೂ ಅಭಯವನ್ನಿತ್ತಿದ್ದಾರೆ.

—ಕುಂಜಾಲಿ.

---



ರೆಸಡಿನ್ಸಿಗೆ ಹೋಗುತ್ತಿದ್ದಾರೆ ಕಣೋ ಕಾಂ. ಟಿಕೆಟ್ ಪಡೆಯುಕ್ಕೆ—ವಯಸ್ಸು ನೋಡಿದರೇ ಕೇಂದ್ರಕ್ಕೇ ಲಾಯಖ್ಖಾಗಿದೆ—

# ವಿಧಾನಸೌಧದಲ್ಲಿ ಕೇಳಿಸಿ ಬಂದುದು

ನವ ರಾಷ್ಟ್ರದ ಮೊದಲ ವಿಧಾನ ಸಭೆಯಲ್ಲಿ ೧೯-೧೨-೫೭ ರಿಂದ ಬೊಂಬಾಯಿ ಕರ್ಣಾಟಕ ಮಂತ್ರಿಗಳು—ಆಂಗ್ಲ ಭಾಷೆಯಲ್ಲಿ ಮಾತನಾಡಿದಾಗ, "ಕನ್ನಡ ಕನ್ನಡ" ಎಂಬ ಕೂಗೆದ್ದಾಗ "ನಮ್ಮ ಕಡೀ ಕನ್ನಡ ಅಂಬೋಣ ಅಂದ್ರೆ ನಿಮಗೆ ತ್ರಾಸಾದೀತು ಕಾರಣ ಇಂಗ್ಲೀಷಲ್ಲೇ ಆಡೇನಿ" ಅಂದರಂತೆ.

* * *

ಬೆಳಗಾಮಿನ ಸೋದರರೊಬ್ಬರು ಮರಾಠಿಯಲ್ಲೇ ಅರ್ಧ ಗಂಟೆ ಒದರಿದರಂತೆ. "ಬೆಳಗಾಮನ್ನು ಮುಂಬಯಿ ಕರ್ಣಾಟಕಕ್ಕೇ ಸೇರಿಸಬೇಕು" ಎಂದು ಅವರಂದಿದೊಂದೂ ಅರ್ಥವಾಗದ ಸದಸ್ಯರಲ್ಲನೇಕರು, ಸೋದರ ಸಹಾನುಭೂತಿ ತೋರಿಸಲೋಸುಗ ಚಪ್ಪಾಳೆ ತಟ್ಟಿ ಪ್ರೋತ್ಸಾಹಿಸಿದರಂತೆ,

* * *

ಅಧ್ಯಕ್ಷ ಶ್ರೀ ಕಂಠಿ ಅವರಂದರಂತೆ "ಭಾಷಣ ಯಾವ ಭಾಷೆಯಲ್ಲಿ ಶುರು ಮಾಡುತ್ತೀರೋ ಅದರಲ್ಲೇ ಮುಂದುವರಿಸಿ ಮುಕ್ತಾಯಗೊಳಿಸಬೇಕು, ಬೇರೆ ಭಾಷೆಯನ್ನು ಮಧ್ಯೆ ತರಬಾರದು" ಎಂದು.

ಇದರಿಂದ ಅರ್ಥವಾಗದವರಾದರೂ ಪೂರ್ಣಸುಖದಿಂದಿರಬಹುದೇನೋ!

* * *

"ಅಧ್ಯಕ್ಷರೇ! ಈ ಸಾರಿ ಅಯ್ಕೆಯ ಪ್ರಸಾರಕ್ಕೆ ನೆಹ್ರೂ ಹಾರ್ಮೋನಿಯಂ ಅನ್ನು ಉಪಯೋಗಿಸದಂತೆ ಕಾನೂನು ಈಗಲೇ ಏರ್ಪಾಡಾಗಬೇಕೆಂದು" ಎದುರು ಪಕ್ಷದವರು ಒತ್ತಾಯಪಡಿಸಲಿಲ್ಲವಂತೆ.

* * *

ಶ್ರೀ ಸಾಂಬ್ರಾಣಿಯವರು ಅಮೋಘವಾದ ಭಾಷಣ ಮಾಡಿದಾಗ, ಸದಸ್ಯರೆಲ್ಲರ ಕಣ್ಣುಗಳಲ್ಲಿಯೂ ನೀರು ತೊಟ್ಟಿಕ್ಕುತ್ತಿತ್ತಂತೆ.

—ಯಾಕೆ? ಅಷ್ಟು ಹೊಗೆ ಒಮ್ಮೆಗೇ ಸದನದಲ್ಲಿ ಕೂಡಿ ಬಂತೇ?

* * *

ಹಳೇ ಮೈಸೂರಿನ ದೃಷ್ಟಿಯಿಂದಲೇ ಹಲವರು ಮಾತನಾಡಿದ್ದಾರೆ ಎಂದರಂತೆ ಮುಖ್ಯಮಂತ್ರಿಗಳು.

—ಹೆಂಡತಿ ಹೋದಮೇಲೂ, ಆಕೆಯ ಬಳೆಗಳನ್ನು ತಡವರಿಸುವ ಗಂಡಂದಿರು ಸಹಜವಲ್ಲವೇ?

* * *

ತುಂಬೇಸೊಪ್ಪಿಗೂ ಅಭಾವ ಇನ್ನುಮೇಲೆ ಎಂದು ಶ್ರೀ ಅಂಬಲಿಯವರು ಹೇಳಿದರೆಂಬುದು ಸುಳ್ಳಂತೆ.

* * *

ಪ್ರಧಾನ ಸಚಿವರು ಕಾಸರಗೋಡಿನ ವಿಷಯನ್ನೆತ್ತಿದ ಮೇಲೆ ಬೆಳಗಾಂ ಪ್ರತಿನಿಧಿಗಳು ಆ ಮಾತನ್ನೂ ಎತ್ತಿದರು ಎನ್ನುವುದು ಖಚಿತವಲ್ಲವಂತೆ.

# ಕ್ರಿಸ್‌ಮಸ್ ರಜೆ

ಕಾಮನ ಹಬ್ಬದಲ್ಲಿ ಕಾಣಿಸುವ ರಂಗು ರಂಗೆಲ್ಲಾ 'ನತ್ತು' ಮುಖದ ಮೇಲೇ ಕಾಣಿಸುತ್ತಿತ್ತು. ಕಣ್ಣು ಥಳಥಳಿಸುತ್ತಿತ್ತು. ಆಡಿದ ಉಸಿರು ಹಾಡುವ ತೆರದಲ್ಲೇ ಸಿಳ್ಳುತ್ತಿತ್ತು. ನಡೆಯುವ ಹೆಜ್ಜೆ ಕುಣಿಯುವ ತೆರನಾಗಿಯೇ ಅಡಿಯಿಡುತ್ತಿತ್ತು. ಡಿಸೆಂಬರ ತಿಂಗಳು ಛಳಿ ಸಂಜೆ, ಕ್ಲಬ್ಬಿಗೆ ಬಂದಾಗಲೇ ಅವ ಬಿಸಿಯೇರಿದಂತೆ ಕಾಣಿಸುತ್ತಿತ್ತು.

"ಎಲಾ! ಇವನ! ಇವನಿಗೇನು ಬಂತು! ಕ್ಲಬ್ಬಿಂದ ಹೊರಬೀಳುವಾಗ ಈ ರೀತಿ ಇರುವುದು ಸಹಜ! ಹಗಲೆಲ್ಲಾ ದುಡಿದು ಕ್ಲಬ್ಬಿಗೆ ಬರುವಾಗಲೇ ಈ ರೀತಿ ಇದ್ದಾನಲ್ಲ! ಇದರ ಮರ್ಮವೇನಿರಬಹುದು" ಎಂದು ನನಗನ್ನಿಸಿತು.

ನನ್ನ ಮೇಜಿನ ಬಳಿಯಲ್ಲೇ ಅವನನ್ನು ಹಿಡಿದು ಕೂರಿಸಿಕೊಂಡೆ. ತಂಪಾಗಲೆಂದು ಒಂದು ಬಟ್ಟಲು ಬಿಸಿ ಚಹಾ ತರಿಸಿ, ಔಷಧಿ ಕುಡಿಸುವಂತೆ ಅವನಿಗೆ ಕುಡಿಸಿದೆ. ನಂತರ ಕೇಳಿದೆ, "ಇದರ ಮರ್ಮ ಏನು" ಎಂದು.

ಇತ್ತೀಚಿಗೆ ಭೂಲೋಕದ ಎಲ್ಲಾ ಪತ್ರಿಕೆಗಳಲ್ಲೂ ಪ್ರಸಿದ್ಧಿಹೊಂದಿದ ನಾಸರನ ಈಜಿಪ್ಟಿನ ಸ್ಫಿಂಕ್ಸ್ ಮಾತನಾಡುವ ರೀತಿಯಲ್ಲಿ ಆ ನತ್ತು ಕೈ ಮೈ ಸನ್ನೆಯಿಂದಲೇ ಎಲ್ಲವನ್ನೂ ತಿಳಿಸಿದ, ಹಿನ್ನೆಲೆಯಲ್ಲಿ ಸಿಳ್ಳಿನ ಆಲಾಪನೆ, ಕಡೇಗೆ, ಕಟ್ಟಕಡೇಗೆ ಎರಡೇ ಅಕ್ಷರ ಉಚ್ಚರಿಸಿದ. ಪು. ಮ.....ಅವನ ಸಿಳ್ಳಿನ ರಾಗಮಾಲಿಕೆಯ ಧಾಟಿಯಿಂದಲೇ ಅರಿತುಕೊಂಡೆ ಅವನ ಇಂಗಿತವನ್ನು... .....ವಿಧಾನ ಸಭೆಯ ಅಧಿಕಾರಿವರ್ಗಕ್ಕೆ ಸೇರಿದ್ದರೂ ಕೂಡ, ಈ ಕ್ರಿಸ್‌ಮಸ್ ಹಬ್ಬದ ಪ್ರಯುಕ್ತ ಇವನಿಗೆ ೨ ದಿನ ರಜೆ ದೊರಕಿತ್ತೆಂದೂ, ಅದನ್ನು ಅವ ತನ್ನ ನೆಚ್ಚಿನ ಹಳ್ಳಿಯೊಂದರಲ್ಲಿ ಕಳೆಯಲು ಏರ್ಪಾಡು ಮಾಡಿಕೊಂಡಿದ್ದನೆಂದೂ, ಆ ಎರಡು ದಿನಅಂದರೆ ನಾಲವತ್ತೆಂಟು ತಾಸುಗಳು ಅವ ಅವರಿವರ ಅಂಕೆಗೆ ಸಿಲುಕದೆ ತನಗೆ ಬೇಕಾದಹಾಗೆ, ಮೆಚ್ಚಿದ ಪುಸ್ತಕವನ್ನು ಓದಿಕೊಂಡು, ತನಗೆ ಪ್ರಿಯವಾದ ಗೀತಗಳನ್ನು ಹಾಡಿಕೊಂಡು ನಿದ್ದೆಬಂದಾಗ ಮಲಗಿ, ಎಚ್ಚತ್ತಾಗ ಎದ್ದು, ಸಿಕ್ಕಿದ್ದು ತಿಂದು, ತಿಂದದ್ದರಲ್ಲೇ ತೃಪ್ತನಾಗಿ, ಸ್ವರ್ಗಸುಖ ಕಾಣಬೇಕೆಂದು ಯೋಜಿಸಿದ್ದನೆಂದೂ, ಅವನ ಪುಣ್ಯದಿಂದ ಅವನ ಮೆಚ್ಚಿನ ನಾಲ್ಕು ಫ್ರಾನ್ಸ್ ಲೇಖಕನ ಹೊಸ ಪುಸ್ತಕಗಳು ಮಾರನೆಯ ದಿನವೇ ಕೈಸೇರುವುದೆಂದೂ, ತಿಳಿಯಿತು.

ನನಗೆ ಈ ಮಾತಿಲ್ಲದ ಭಾಷೆಯಲ್ಲಿ ಸುದ್ದಿ ಕಂಡುಬಂದಾಗ ಹೊಟ್ಟೆ ಉರಿದು ಹೋಯಿತು. ನಾನು ಖಾಸಗಿ ಡಾಕ್ಟರು. ಹಗಲೂ ಇರುಳೂ, ವಾರ ನೋಡದೆ, ದಿನ ಕಾಣದೆ, ಹಬ್ಬ ಅರಿಯದೆ, ನಿತ್ಯ ತಿಥಿ ಆಚರಿಸುವ ಕಸುಬಿಗೆ ಸೇರಿದವನು· ಯಾರಾದರೂ ಎರಡು ದಿನ ಹಿತವಾಗಿ, ತಮ್ಮ ಮನಸ್ಸಿಗೆ ತೋರೀದಂತೆ, ತಮ್ಮ ಆತ್ಮಕ್ಕೆ ಒಪ್ಪಿದುದನ್ನು ಓದಿಕೊಂಡು ನಲಿದರೆ, ಆಗ ಅವರಿಗೆ ಆಗಂತುಕರ ಕಾಟ ವಿಲ್ಲದೆ ಟೆಲಿಫೋನಿನ ಹಾವಳಿಯಿಲ್ಲದೆ ಮರ್ತ್ಯ ಲೋಕ, ಲಾಭ, ಕ್ರೋಧ, ಮದ ಮಾತ್ಸರ್ಯವಿಲ್ಲದೆ ಮುಖ್ಯ ಅಹಂ-ಕಾರವಿಲ್ಲದೆ ಇರುವಂತಾದರೆ, ದಿಟವಾಗಲೂ ಹೇಳುತ್ತೀನೆ, ನನ್ನ ಹೊಟ್ಟೆ ಉರಿದುಹೋಗುತ್ತದೆ. ಆದರೂ ಸರ್ವೇ ಜನಾಃ ಸುಖಿನೋ ಭವಂತು ಅಲ್ಲವೇ? ಆದರೂ ಪು. ಮ. ಎಂದನಲ್ಲ ಏನದು ಎಂದೆ. ಆಗ ನತ್ತು ಪುಣ್ಯ ಮರುಕಳಿಸಿತು ಎಂದ.

ಅವನನ್ನು ತಿಳಿಮನಸ್ಸಿನಿಂದ ಹರಸಿ ನಿನ್ನ ರಜೆಯು ನಿನಗೆ ಸ್ವರ್ಗ ಸುಖವನ್ನು ಕೊಡಲಿ, ಎಂದು ಪುನಸ್ಸಾರೆ ಹೇಳಿದೆ, ಎಂದು ತಿಳಿದುಕೊಂಡೆ.

ಆ ವೇಳೆಗೆ ಬಹು ದೇಹಗಳು ನಮ್ಮ ಮೇಜಿನ ಬಳಿಗೇ ಬಂದುವು. ಸಂಜೆ ಏಳಾಗಿತ್ತು. ಮುಖದಲ್ಲಿ ಒಣಗಿದ ನಾಲಿಗೆಗಳೇ ಕಾಣಬರುತ್ತಿದ್ದುವು. ಬಿಸಿಲು ಗಾಲದಲ್ಲಿ, ಮಟಮಟ ಮಧ್ಯಾಹ್ನದಲ್ಲಿ, ಮಧ್ಯ ಉಷ್ಣವಲಯದ ಊರಲ್ಲಿ, ಟಾರು ರಸ್ತೆಯ ಅಂಚಿನಲ್ಲಿ ಮಲಗಿರುವ ನಾಯಿಗಳ ಮುಖಗಳಂತೆಯೇ ಕಾಣಬರುತ್ತಿದ್ದುವು. ಅಂದ ಮೇಲೆ ಮುಂದುವರಿದುದನ್ನು ಹೇಳಬೇಕೇ?

ಹಾಗೂ, ಹೇಳುವ ಸ್ಥಿತಪ್ರಜ್ಞರು, ಅಲ್ಲೆಲ್ಲಿ ಇದ್ದಾರು, ಅಲ್ಲಿಗೆ ಏಕೆ ಬಂದಾರು?

*　　　*　　　*

ಯೇಸುವಿನ ಅಮರ ಸಂದೇಶವನ್ನು ಎರಡೇ ಅಕ್ಷರಗಳಲ್ಲಿ ನಮೂದಿಸಿ ಎಂದು ಲೆಕ್ಕಖಾತೆಯ ಸಂಸ್ಕೃತಿಯಿದ್ದ ಅಧಿಕಾರಿಗೆ, ಅವನ ಕ್ರಿಶ್ಚಿಯನ್ ಹಿರಿಯಧಿಕಾರಿಗಳು ಹೇಳಿದರಂತೆ; ಡಿಸೆಂಬರ ೨೪ನೇ ತಾರೀಖು ಸಂಧ್ಯೆ ೫-೩೦ಕ್ಕೆ, ಕಛೇರಿ ಮುಕ್ತಾಯ ವಾಗುವ ಸಮಯಕ್ಕೆ "ಪ್ರೇಮ" ಎಂದು ಕಿರಿಯಧಿಕಾರಿ ಬರೆದು ಹೋದನಂತೆ.

ಎರಡು ವರ್ಷಗಳ ನಂತರ ಹಿರಿಯಧಿಕಾರಿಯು ನಿವೃತ್ತನಾದಾಗ, ೨೩ ಜನರ ಪೈಪೋಟಿಯಿದ್ದರೂ, ಆ ಹಿರಿಯಧಿಕಾರಿಯು ಸಲಹೆಯ ಮೇರೆಗೆ ಆ ಕಿರಿಯಧಿಕಾರಿಗೆ ದೊಡ್ಡ ಹುದ್ದೆ ದೊರಕಿತಂತೆ. ಕಿರಿಯಧಿಕಾರಿ ಕಣ್ಣೀರಿಟ್ಟನಂತೆ, ಅಸಂಭವ ಆಣತಿ ತನಗೆ ಬಂದಾಗ ಕರುಣಾಮಯ ಗುಣಗ್ರಾಹಿ ನಿವೃತ್ತ ಹಿರಿಯಧಿಕಾರಿಯ ಮೇಲಿನ ಪ್ರೇಮಕ್ಕೆ ಕಾಣಿಕೆಯಾದ ಆ ಕಣ್ಣೀರು ಹನಿದಿದ್ದು ಸಹಜವಲ್ಲವೇ? ಯೇಸುವಿನ ಉಪದೇಶ ಒಂದು ಮಾನವ ಸಂಬಂಧದಲ್ಲಿಯಾದರೂ ಅಮರವಾಯಿ ತಲ್ಲವೇ?

*　　　*　　　*

ಯೇಸುವಿನ ಅಮರ ಸಂದೇಶವನ್ನು ಜ್ಞಾಪಿಸಿಕೊಂಡೇ, ಹಾಗೂ ರಜಾ ಹೋಗುವವನ ಅದೃಷ್ಟವನ್ನು ಜ್ಞಾಪಿಸಿಕೊಂಡೇ, ಮನೆಗೆ ಕ್ಲಬ್ಬಿನಿಂದ ಹಿಂತಿರುಗಿದೆ- ಕ್ರಿಸ್‌ಮಸ್ ಕಾಲದಲ್ಲಿ ಕರುಬಬಹುದೇ ?

* * *

ಡಿಸೆಂಬರ ಮೂವತ್ತೊಂದನೇ ತಾರೀಖು ಕ್ಲಬ್ಬಿನಲ್ಲಿ ಹಬ್ಬದೂಟ. ರಾತ್ರಿ ಹನ್ನೆರಡು ಗಂಟೆಗೆ ಹೊಸ ವರ್ಷವನ್ನು ಸ್ವಾಗತಿಸಲು, ಜೋಡಿ ಜೋಡಿಗಳೆಲ್ಲವೂ ಹುರುಪಿನಿಂದ ಸಿದ್ಧವಾಗುವ ಸಾಮೂಹಿಕ ರಸ ನಿಮಿಷ.

ಊಟಕ್ಕೆ ಕುಳಿತಾಗ, ತಟ್ಟೆ ಖಾಲಿಯಾದಾಗ, ಯಥಾಪ್ರಕಾರ ಸೇವಕನು ವಿಳಂಬಮಾಡಿದಾಗ, ಆ ಕಡೆ ಈ ಕಡೆ ತಿರುಗಿ ನೋಡುವ ಕಾರ್ಯಕ್ರಮ ಸ್ವಭಾವ ಸಿದ್ಧವಾದದ್ದೇ ಅಲ್ಲವೇ. ಹಾಗೇ ಮಾಡಿದೆ. ನನ್ನ ಪಂಕ್ತಿಯ ತುದಿಯಲ್ಲೇ "ನತ್ತು" ಕುಳಿತಿದ್ದಾನೆ ಕ್ರಿಸ್‌ಮಸ್ ಎರಡು ದಿನ ರಜಾವನ್ನು ಮಜಾವಾಗಿ ಕಳೆದು ಕಾಯಕಲ್ಪಗೊಂಡಿರುತ್ತಾನೆ ಎಂದು ಎಣಿಸಿದ್ದ ನನಗೆ, ಅವನ ಮುಖವು, ಮುಖದ ಕಾಂತಿಯು, ಬೇಕಾದವರು ಕೆನ್ನೆಗೆ ಚಪ್ಪಲಿಯಲ್ಲಿ ಹೊಡೆದರೆ ಹೇಗಾಗುತ್ತೆ, ಹಾಗೆ ಪರಿಣಾಮವನ್ನುಂಟುಮಾಡಿದಂತೆ ಕಾಣಿಸಿತು ಉದ್ದಮೊಗ, ಶವದ ಕಂಗಳು, ಬೇಸ್ತುಬಿದ್ದ ಕಳೆ. ಇವೆಲ್ಲವೂ ಯಾಕೆ ಇವನಿಗೆ ಈಗ ಎಂದು ಅನ್ನಿಸಿತು.

ಊಟ ಮಗಿದ ಮೇಲೆ 'ನತ್ತು'ವನ್ನು ಹುಡುಕಿದೆ. ನರ್ತನ ಮಂದಿರದ ಅಂಚಿನಲ್ಲಿದ್ದ ಅಂದದ ಗಿಡದ ಕುಂಡದ ಹಿಂದೆ ಅವ ಸಿಕ್ಕಿದ. ಭಾವನಾ ನರಕದಲ್ಲೇ ಇದ್ದಂತೆ ಕಂಡ. ಹತ್ತಿರ ಹೋಗಿ ಭುಜವನ್ನು ತಟ್ಟಿ "ಏಕೆ ? ಮಗನೆ ? ಹೀಗಿದ್ದೀ ! ಅಂತಹ ಸ್ವರ್ಗ ಸುಖದ ರಜೆಯನ್ನು ಅನುಭವಿಸಿ ಬಂದೂ ಕೂಡ ಈ ರೀತಿ ಇರಲು ಕಾರಣವಾದರೂ ಏನು ? ದಿಟ ! ನಿನ್ನ ರಜಾ ಯೋಜನೆಯನ್ನು ಕೇಳಿ ನಾನು ಕರುಬಿದ್ದೆ. ಆ ಕರುಬಿನ ದೃಷ್ಟಿ ನಿನಗೆ ತಾಕಿತೇ ! ಎಂದು ಕಳಂಕ ಮನಸ್ಸಿನಿಂದ, ಹಾಗೂ ತಿಳಿಮನಸ್ಸಿನಿಂದ ಕೇಳಿದೆ. ಆ ಧ್ವನಿ, ಆ ಸಹಜತೆ, ಆ ಮಾತುಗಳು ಅವನನ್ನು ನನ್ನ ಕಡೆಗೆ ತಿರುಗಿಸಿತು.

ಆಗ 'ನತ್ತು' ಅಂದ. ವರ್ಷವೆಲ್ಲಾ ಈ ರಜೆಯ ಸುಖಕ್ಕಾಗಿ ಕಾದಿದ್ದೆ. ಡಾಕ್ಟರ್ ! ಆದರೆ ರಜೆಯ ಹಿಂದಿನ ದಿನ ಕೂಡ ಆ ಪುಸ್ತಕಗಳು ಬರಲಿಲ್ಲ. ಮೂರು ದಿನಕ್ಕೆ ಮುಂಚೆಯೇ ಬರಬೇಕಾಗಿತ್ತು ! ಆ ಸಂಜೆ ನಮ್ಮ ಅಧಿಕಾರಿಗಳು ತುರ್ತು ಹೇಳಿಕಳಿಸಿ ನೀನು ರಜೆ ಹೋಗಬೇಡ, ನಿನ್ನ ಸಹೋದ್ಯೋಗಿಯ ಹೆಂಡತಿಗೆ ಸಖತ್ ಖಾಯಿಲೆ ಆದ್ದರಿಂದ ಆತ ರಜೆ ಹೋಗುತ್ತಾನೆ, ನೀನಿರಲೇಬೇಕು ಎಂದರು. ನನ್ನ ಸ್ವಂತ ಖುಷಿಗೆ ನಾನು ರಜೆ ಹೋಗುತ್ತಿದ್ದುದು. ನನ್ನ ಸಹೋದ್ಯೋಗಿಯು ತನ್ನವರ ಕಷ್ಟಕ್ಕೆ ರಜೆ ಹೋಗುತ್ತಿದ್ದುದು. ಇದನ್ನರಿತು ನಾನು 'ಆಗಲಿ ಸಾರ್' ಎಂದು ರಜೆಯನ್ನು ಮನ್ನಾಮಾಡಿಕೊಂಡೆ. ಆ ಎರಡು ದಿನಗಳೂ, ನಾಲವತ್ತಾರು

ತಾಸು ಕೆಲಸಮಾಡಿ ಮನಸ್ಸನ್ನು ಹಗುರಪಡಿಸಲೆತ್ನಿಸಿದೆ. ಆದರೆ— ಆದರೆ— ಅದು ಶಾಂತಿಯನ್ನು ಕೊಡಲಿಲ್ಲ. ಅದಕ್ಕೇ ಇಂದು ಇಲ್ಲಿಗೆ ಬಂದು, ಎಲ್ಲರ ಸುಖವನ್ನು ನೋಡಿ ಸಂತಸಗೊಳ್ಳುವ ಎಂದುಕೊಂಡೆ ಆದರೆ.... ಆದರೆ....

ನನಗೆ ಇದು ತಿಳಿದಿತ್ತಿಲ್ಲ :—ನತ್ತು ಕಾನೂನ ರಚಿಸುವ ಕುಶಾಗ್ರಮತಿ ಇವನಿಗೆ ಹೃದಯ ಇತ್ತೆಂದೂ ಅರಿತಿರಲಿಲ್ಲ. ಆಗ ಹೇಳಿದೆ, "ನತ್ತು, ಇದನ್ನು ಮರೆತುಬಿಡು, ಹೊಸವರ್ಷ ಉದಯಿಸುತ್ತದೆ, ನಿನ್ನ ಜೀವನ ಧಾಟಿಯೆ ಬೇರೆಯಾಗುತ್ತದೆ" ಎಂದು.

ಹನ್ನೆರಡು ಹೊಡೆಯಿತು. ಚರ್ಚಿನ ಗಂಟೆಗಳೆಲ್ಲವೂ ಬಾರಿಸಿದುವು. ನಾನು ಅವನನ್ನು ತಬ್ಬಿಕೊಂಡೆ. ಶುಭಾಶಯಗಳನ್ನು ಕೋರಿದೆ.

ಮನೆಗೆ ಹೊರಟಾಗ ನತ್ತುವಿನ ಕಣ್ಣಲ್ಲಿ ಶುಭಾಶ್ರುಗಳು ಕಂಡುವೆಂದುಕೊಂಡೆ.

* * *

ಅಲ್ಲಾ ! ಕೊರವ! ಈ ಕ್ಲಬ್ಬಿನಲ್ಲಿ ಇಂತಹ ವಾತಾವರಣದಲ್ಲಿ, ಇಂತಹ ಪ್ರಸಂಗ ನಡೆಯಬಹುದು ಎಂದು ನಾನು ತಿಳಿದಿರಲಿಲ್ಲ ಎಂದೆ. ಜನವರಿ ಒಂದರ ಸಂಜೆ, ವಿವರಿಸುತ್ತಾ. ಕೊರವ ನಕ್ಕು, ಹಸು ಮಗು ಡಾಕ್ಟರ್ ನೀವು, ಎಂದ.

—ಡಾ॥ ಶಾಸ್ತ್ರಿ.

—o—

# ಬಾಧೆ

ಗಾಳಿಯಲ್ಲೇ ತೂರಿ ಬರುವ
ನೀರಿನಲ್ಲೇ ಮುಳುಗಿಬರುವ
ನೆಲದ ಮೇಲೆ ಹರಿದು ಬರುವ
ಬಿದ್ದಕಡೆ ಬೇರುಬಿಡುವ
ಕತ್ತಲಲ್ಲಿ ಕಾಲ ತಡೆವ
ಬೆತ್ತಲಲ್ಲೇ ಸುತ್ತ ಸುಳಿವ
ಯಾವುದದು, ಎಂಥ, ಏನು,
ಹೆಸರು ಏನು ? ಸುಳ್ಳೊ, ನಿಜವೊ,
ಉಂಟೊ ಇಲ್ಲೊ ಕಣ್ಣು ಹಲ್ಲು
ಕಲ್ಲೊ ಹುಲ್ಲೊ ಕೂಸೊ ಮುದಿಯೊ
ಇರುವುದೋ, ಅದು ಸಲ್ಲದೋ,
ಹೇಳಿರೆನಗೆ ಬಲ್ಲ ಜನರು
ತಾಳಲಾರೆ ಬಾಧೆಯ.

—ಶ್ರೀಪತಿ.

# ದಫೇದಾರ್ ದೇರಣ್ಣೋರು

"ಸಾವಂತ್ರಿ ಕೃಪೆ"

---

ರಣ ರಣ ಸುಡುಬಿಸಿಲು. ಮಟಮಟ ಮಧ್ಯಾಹ್ನ. ಒಣ ಮರ—ಮುರಿದ ರೆಂಬೆ, ಕೂತ ಕಾಗೆ, ಕೂಗಿದ ಕೇಕೆ—"ಕಾಕಾ ಕಾಕಾ" ಮನೆಯ ಒಳ ಅಂಗಳ ದಲ್ಲಿನ ನೆರಳು ತೀಪೆಯಲ್ಲಿ ಮರಳು ಕಾಡಲ್ಲಿ ಕುಳಿತ ಮರುಳು ಸಿದ್ಧನಂತೆ ಕೂತಿದ್ದರು ಶ್ರೀಮಾನ್ ದಫೇದಾರ್ ದೇರಣ್ಣನವರು. ಜೀವ ಬೇಸತ್ತಿತ್ತು. ಬೆಳದಿಂಗಳೇ ಬಿಸಿಲಿನಂತಿತ್ತು ಅಂದ ಮೇಲೆ ಬಿಸಿಲು ಜ್ವಾಲಾಮುಖಿಯ ಬಾಯೇ ಆಗಿತ್ತು ಅವರ ಪಾಲಿಗೆ.

ಬಿಸಿಲಲ್ಲಿ ಒಣಗಿಸುತ್ತಿದ್ದರು ಪಕೋಡಗಳನ್ನು. ತಟ್ಟೆಯಲ್ಲಿಟ್ಟು ಕಾಯಿಸು ತ್ತಿದ್ದರು. "ದೇರಣ್ಣ ಪ್ರಭೋ ಇದೇನು ಪಕೋಡವನ್ನು ಬಿಸಿಲಲ್ಲಿ ಒಣಗಿಸಿದವ ರುಂಟೆ?"

—ಎಂದೆನ್ನುತ್ತಾ ಅವರ ಬಳಿ ನಿಂತೆ. ಭಾರವಾದ ಮೀಸೆಯನ್ನು ಹೊತ್ತ ಮುಖವನ್ನು ಎತ್ತಲಾರದೆ ಎತ್ತಿ ನನ್ನ ನೋಡಿದರು. ಕಣ್ಣು ಕೆಂಪಾಗಿತ್ತು—ರೆಪ್ಪೆ ಅರೆಮುಚ್ಚಿತ್ತು. ಹುಬ್ಬು ಚಿಂತೆಯ ಭಾರದಿಂದಾಗಿ ಬಾಗಿತ್ತು ಬಾದಾಮಿ ಕ್ರಾಪಿನ ತಲೆಯ ಕೂದಲು ಅಸ್ತವ್ಯಸ್ಥವಾಗಿತ್ತು. ಅವರ ಮುಖ ನೋಡುತ್ತಲೂ ನನ್ನ ಕಣ್ಣೂ ತೇವವಾಯಿತು. ನನ್ನನ್ನೊಮ್ಮೆ ನೋಡಿ ಹಾಗೇ—ಬಿಸಿಲಲ್ಲಿ ಕಾಯು ತ್ತಿದ್ದ ಪಕೋಡದ ತಟ್ಟೆಯನ್ನೊಮ್ಮೆ ನೋಡಿ ಆಕಾಶ ನೋಡಿ ನಿಟ್ಟುಸಿರು ಬಿಟ್ಟರು. ಎಡಗೈಯಲ್ಲಿ ಹಣೆ ಮೇಲಿನ ಬೆವರು ಒರಸಿದರು—ದೃಶ್ಯ ತುಂಬಾ ಕರುಣಾಜನಕ ವಾಗಿತ್ತು.

"ಇಂಥಾ ಕರುಣಾ ಜನಕ ದೃಶ್ಯಕ್ಕೆ ಕಾರಣ ಕೇಳಬಹುದೇ ದೇರಣ್ಣೋರೇ"

"ಕರುಣಾಜನಕ—ಜನಕ ಕನಕ—ಕನ್ನವಿಕ್ಕುವರಾರು?" ಎಂದು ನನಗೇ ಸವಾಲಿನಂತೆ ಕೇಳಿದರು.

"ಒಳಕ್ಕೆ ಬನ್ನಿ—ಬಿಡಿಸಿ ಹೇಳಿ ಜನಕ—ಕನಕ ಅರ್ಥವಾಗೋ ಹಾಗೆ"

"ಒಳಕ್ಕೆ—ನನಗೆಲ್ಲಿ ಒಳಗೆ—ಸಾವಂತ್ರಿ ಹೊರಗೆ ಹೋದ ಮೇಲೆ ಮನೆಯೂ ಕಾಡೇ ಆಗಿದೆ ನನಗೆ ..."

"ಕ್ಷಮಿಸಿ—ಕರುಣಾಜನಕದ ವಿಚಾರ ಅರ್ಥವಾಯ್ತು....ಆದರೆ ಜನಕ—ಕನಕ"

"ಅದೇ ನಾನು ಬೀರೂ—ಬೀರಣ್ಣನ ಜನಕನಾದ ಮೇಲೆ ಮಗು ಮುಖ ನೋಡೋಕೆ ಬಾಗೂರಿಗೇ ಬೆನ್ನು ಬಾಗಿಸಿಕೊಂಡು ಗುಲಾಮನ ಹಾಗೆ ಹೋಗ ಬೇಕೇ ಹೊರ್ತು, ರಾಣಿ ಸಾಹೇಬರು ಬರುವ ಹಾಗೇ ಇಲ್ಲ."

"ಸರಿ, ಜನಕನ ವಿಷಯ ತಲೆಗೇರ್ರ್ತು ಇನ್ನು ಕನಕ?"

"ನಾ ಸಬ್ಬಿಇನಿಸ್ಪೆಕ್ಟರಾದ ಮೇಲೆ ಬರೋ ಕನಕವಿದೆಯಲ್ಲಾ ಅದರಲ್ಲಿ ಚಿನ್ನದ ಉಡುದಾರ ಮಾಡ್ಸಿ ಬೀರಣ್ಣನ ಸೊಂಟಕ್ಕೆ ಕಟ್ಸಿಕೊಂಡು ಬರಬೇಕಂತ ಸಾವಂತ್ರಿ—ಹಾಗಾಗಬೇಕಾದರೆ ಕನ್ನೋಜಿಯನ್ನ ನಾನು ಹಿಡಿದು ಲಾಕಪ್ಪಿಗೆ ಹಾಕಿಸ ಬೇಕು."

"ಹುಂ ಸರಿ....ಅದಕ್ಕೆಯೋ ನೀವು ಕನ್ನವಿಕ್ಕುವವರ‍್ಯಾರೂಂತ ಅಂದದ್ದು?"

"ಕನ್ನವಿಕ್ಕುವವರಿಗೇನೂ ಕಡಿಮೆ ಇಲ್ಲ—ಆದರೆ ಹಾಗೆ ಇಕ್ಕಿದವರು ಸಿಕ್ಕ ಬೇಕಲ್ಲಾ ನಾನು ಸಬ್‌ಇನ್ಸ್ಪೆಕ್ಟರಾಗಬೇಕಾದರೆ...."

ಅದಕ್ಕೆ ಪ್ರಯತ್ನಪಡಬೇಕು ದಫೆದಾರ್‌ಜೀ ಹೀಗೆ ಓ ಲಕ್ಷ್ಮೀಕಾಂತ ತಲೆ ಮೇಲೆ ಕೈ ಹೊತ್ಕೊಂಡು ಬಿಸಿಲಲ್ಲಿ ಪಕೋಡ ಕಾಯಿಸಿದರೆ ಬೀರಣ್ಣನಿಗೆ ಚಿನ್ನದುಡು ದಾರ ಬರುತ್ತೈ ಇದ್ಯಾಕೊ ನನಗೆ ಸರಿಬೀಳೊಲ್ಲ ದಫೆದಾರ್ರೆ ಸರ್ಕಸ್ಸಿನವರಿಗೆ ಹುಲಿ ಮಾರಿದವರು—ಕೆಲ್ಲೊಡು ಕರಡಿ ಕೊಬ್ಬು ಮುರಿದವರು ಮಣಗಟ್ಟಲೆ ಪಕೋಡ ತಿಂದು ಅರಗಿಸಿಕೊಂಡವರು—ಮೂರು ಜನ ಕಳ್ಳರನ್ನ ಹಿಡಿದು ಹಾಕೋದುಬಿಟ್ಟು ಹೆಂಗಸಿನ ಹಾಗೆ ಗೊಳೋ ಅಂತ ಅಳ್ತೀರಲ್ಲ ನಾಚಿಕೆಯಾಗೋಲ್ಲಾ?...."

ಎಂದು ಒಂದೇ ಸನು ಅರಳು ಹುರಿದ ಹಾಗೆ ಸರಸರನೆ ಅವರನ್ನ ಒಂದೇ ಉಸುರಿನಲ್ಲಿ ಅಂದುಬಿಟ್ಟೆ. ಕಣ್ಣಂಚಿನಲ್ಲಿದ್ದ ನೀರು ಕೆನ್ನೆಗೆ ಸರಿಯಿತು. ದೇರಣ್ಣ ನವರು ಕಲ್ಲಿನಂತಿದ್ದರು. ನನ್ನ ಮಾತು ಅವರನ್ನ ಕಲ್ಲುಮಾಡಿರಬೇಕು ಎಂದು ಮತ್ತೆ ತಕ್ಕೈಸಿದೆ—

"ಏಳಿ ಎದ್ದೇಳಿ ಕಾರ್ಯೋನ್ಮುಖರಾಗಿರಿ, ನಾನು ಹೇಳಿದ್ದು ಮನಸ್ಸಿಗೆ ಬಂತೇ ಎದೆ ಕಲ್ಲುಮಾಡಿದಿರಾ?" ಎಂದಾಗ.

"ಎಲ್ಲಿ ಎಳ್ತಾಳೆ ಅವಳು—ತನ್ನ ಯೋಚನೆಯೇ ತನಗೆ, ತನ್ನ ಗಂಡನ ಚಿಂತೆಯೇ ಇಲ್ಲ ಕಠಿಣ ಹೃದಯಿಣಿ ಸಾವಂತ್ರಿ."

—ಎಂದಾಗ ನಾನೇ ಆಳುವಂತೆ ಆಯಿತು. ನಾನು ಅಷ್ಟೆಲ್ಲಾ ಖಾರದ ಮಾತಾಡಿದಾಗ ಅದರ ಅರಿವೇ ಅವರಿಗಿಲ್ಲದೆ ಸಾವಂತ್ರಿಯ ಚಿಂತೆಯೇ ಅವರದಾಗಿತ್ತು. ಬಾಗಿಲು ತಟ್ಟಿದ ಸದ್ದಾಯಿತು—ಗಾಡಿ ನಿಂತ ಸದ್ದಾಯಿತು. ಮಗು ಅತ್ತ ಸದ್ದಾಯಿತು. ದೊಡ್ಡ ಬುಟ್ಟಿ ಹೊತ್ತು ಒಳಕ್ಕೆ ಬಂದ ವ್ಯಕ್ತಿಯನ್ನು ನೋಡಿದೊಡನೇ ಎದ್ದು ನಿಂತರು. ದಫೇದಾರರ—

ಪೇಟ ಗಡ ಗಡ ನಡುಗಿತು—

ತುಟಿ ಪಟ ಪಟ ಬಡಿಯಿತು

ಕಾಲು ಗಾಳಿಪಟ ರೊಂಯ್‌ಯಂತೆ ಅದುರಿತು—

ಕೈಗೆ ಅದುರುವಾಯು ಬಡಿಯಿತು

ಕಣ್ಣು ಆಲಿಗಳು ಮೇಲೆ ಸಿಕ್ಕಿಕೊಂಡು ಧೊಪ್ಪನೆ ಬಿದ್ದು ಮೂರ್ಛೆ ಹೋದರು. ನನಗೆ ಗಾಬರಿಯಾಯ್ತು—ಹಾಗೇ ಬಿಟ್ಟಕಣ್ಣಿಂದ ಹೊರಬಾಗಿಲ ಕಡೆ ನೋಡಿದೆ. ಕಣ್ಣುಜ್ಜಿ ನೋಡಿದೆ—ಹೊಚ್ಚಹೊಸ ನೀಲಿ ಜರಿ ಸೀರೆಯ ನೆರಿಚಿಮ್ಮಿ ಗಾಜಿನ ಗೊಂಬೆಯಂತ ದಷ್ಟ ಪುಷ್ಟ ಮಗುವನ್ನು ಕೊಂಕುಳಲ್ಲೆತ್ತಿಕೊಂಡು ರತಿಯಂತೆ ಹೊಸಲು ದಾಟಿ ಬಂದರು ಸೌ|| ಸಾವಂತ್ರಮ್ಮನವರು. ಬೊಗಸೆ ಗಣ್ಣಿಗೆ ಕಾಡಿಗೆ ಒಪ್ಪಿತ್ತು—ಆ ಕಣ್ಣಿಂದ ಕಾಡಿಗೆಗೇ ಸೊಬಗು ಬಂದಿತ್ತು—ಸಂಪಿಗೆ ಎಸಳಿನ ಮೂಗಿಗೆ ನತ್ತು ನಾಚಿ ಕುಳಿತಂತಿತ್ತು—ಬಾಳೆಯ ದಿಂಡಿನಂತಹ ತೋಳುಗಳಲ್ಲಿನ ಹತ್ತು ಕರಿಯ ಬಳೆಗಳು ಸೌಂದರ್ಯವನ್ನು ಕೈಯಿಂದ ಪಡೆದಿದ್ದವು.

"ನನನ....ನಮಸ್ಕಾರವಮ್ಮ" ಎಂದು ತೊದಲಿದೆ.

ಮಗುವನ್ನು ತೋರಿಸಿ—ಮೀನಾಕ್ಷಿಯ ಸೌಖ್ಯ ವಿಚಾರಿಸಿದರು. ಯಜಮಾನರ ಮೂರ್ಛೆಯ ಬಗ್ಗೆ ಆಕೆಗೆ ಕಾತುರತೆಯೇ ಇದ್ದಂತೆ ಕಾಣಲಿಲ್ಲ. ಸಾವಂತ್ರಮ್ಮನವರನ್ನ ಕಂಡ ಹಿಗ್ಗಿನಲ್ಲಿ ದೇರಣ್ಣ ಪ್ರಭು ಮೂರ್ಛೆ ಹೋಗಿರಬಹುದೆ? ಇಲ್ಲ! ಮೊದಲು ಬಂದ ಭೀಮಾಕಾರಿ ವ್ಯಕ್ತಿಯೇ ಇವರ ಸಧ್ಯದ ಸ್ಥಿತಿಗೆ ಕಾರಣವೆಂದ್ರು ಗೊತ್ತಾಯಿತು.

"ಕ್ಷಮಿಸಿ ಸಾವಂತ್ರಮ್ಮನವರೇ....ದಫೇದಾರರ ಸ್ಥಿತಿ ನೋಡಿ ನೀವು ಬಂದ ಕೂಡ್ಲೆ ಹೀಗಾದದ್ದು ಅನ್ಯಾಯ" ಎಂದು ಅಯ್ಯೋ ಪಾಪ ಹೇಳಿದೆ.

"ಪರವಾಗಿಲ್ಲ ನನಗೆ ಗೊತ್ತು ಅವರನ್ನ ಎಚ್ಚರಿಸೊ ಬಗೆ—" ಎಂದು ಶಾಂತವಾಗಿ ಹೇಳಿದರು.

ದೊಡ್ಡ ಬುಟ್ಟಿ ತಂದ ಭೀಮನು ಎಲ್ಲಾ ಸಾಮಾನನ್ನೂ ತಂದಿಟ್ಟ. ತೊಟ್ಟಿಲು ಸರಸರನೆ ಕಟ್ಟಿದ—ಬೀರಣ್ಣನನ್ನ ಸಾವಂತ್ರಮ್ಮ ಅಲ್ಲಿ ದುಪಟಿ ಹಾಸಿ ಮಲಗಿಸಿದರು.

"ಕನ್ನೂ ಹೊರಗಿರು" ಎಂದಾಗ ಆ ವ್ಯಕ್ತಿ ಹೊರಗೆ ಕುಳಿತ. ಸೆರಗು ಸೊಂಟಕ್ಕೆ ಸೆಕ್ಕಿ—ಮಂಡಿ ಊರಿ ಮೂರ್ಛೆಹೋದ ದೇರಣ್ಣನವರ ಕಿವಿ ಬಳಿ ತುಟಿ

ಹಾಯಿಸಿ "ಕನ್ನೋಜಿ ಹೋದ ಏಳೀಂದ್ರೆ" ಎಂದಾಗ ಗುಮ್ಮ ಹೋದಾಗ ಎದ್ದು ಕುಳಿತ ಮಗುವಿನಂತೆ ಒಮ್ಮೆಲೇ ಎದ್ದು ಕುಳಿತರು.

ಹಾಗೇ ದಿಟ್ಟಿಸಿ ಸಾವಂತ್ರಿಯನ್ನು ನೋಡಿದಾಗ—ಕ್ಷಣದ ಹಿಂದೆ ಇದ್ದ ಕಣ್ಣೀರು ಆನಂದಭಾಷ್ಪವಾಯಿತು. ಬಿಸಿಲಲ್ಲಿನ ಪಕೋಡವನ್ನು ನೆರಳಿಗೆ ತಂದರು. ಬಿಸಿಲು ಬೆಳದಿಂಗಳಾಯಿತು—ಕಾಗೆಯ ಕೂಗು ಕೋಗಿಲೆಯ ಕೂ ಹೂ ಆಯಿತು. ಮಟಮಟ ಮಧ್ಯಾಹ್ನ ಆಹ್ಲಾದಕರ ಮುಂಜಾವಿನಂತೆ ಬೆಳಗಿತು. ಜ್ವಾಲಾಮುಖಿಯ ಬಾಯಿ ಪಾರಿಜಾತದ ರಾಶಿಯಾಯಿತು.

"ಸಾವಂತ್ರಾ...ಕಡೆಗೂ ಕೃಪೆ ಬಂತಲ್ಲ....ಈ ದಫೇದಾರರನ್ನೇ ಒಲಿದು ಬಂದೆಯಾ....ಸಬ್ಬಿನಿಸ್ಪೆಕ್ಟರ ಕನಸು ಹೋಯಿತೆ?....ಕನ್ನೋಜಿ ಎಲ್ಲಿ?"

"ನಿಮಗಂತೂ ಯೋಗ್ಯತೆ ಇಲ್ಲ ನಾನಾದರೂ ಮಾರ್ಗ ನೋಡಬೇಡವೇ—ಖಂಡಿತ ನಮ್ಮ ಬೀರು ಸಬ್ಬಿನಿಸ್ಪೆಕ್ಟರ ಮಗನಾಗುವ."

"ಹೌದೆ? ಅದು ಹೇಗೆ?...."

"ಬಾಗೂರಲ್ಲಿ ಬೇಸತ್ತು ಕೂತಾಗ ಕನ್ನೋಜಿ ಬಂದು ಕಾಣಿಸಿಕೊಂಡ. ಆಗಲೇ ಕನ್ನೋಜಿ ಭಾರೀ ದರೋಡೆಮಾಡಿ—ಹಿಡಿದುಕೊಟ್ಟವರಿಗೆ ದೊಡ್ಡಬಹುಮಾನ ಅಲ್ಲದೆ ಹಿಡಿದ ಪೋಲೀಸು ಸಬ್ಬಿನಿಸ್ಪೆಕ್ಟರು ನಿಜ...."

"ಹೌದು ಅದು ಗೊತ್ತು ನೀನೂ...."

"ಹೌದು ಕನ್ನೋಜಿಯ ದಯೆ—ನನ್ನ ಪ್ರತಿಜ್ಞೆ ಹೇಳಿದೆ—ಅಲ್ಲದೆ ನಿಮ್ಮನ್ನು ಕಾಣುವ ಹಂಬಲವನ್ನು ಹೇಳಿದೆ. "ಅಯ್ಯೋ ತಾಯಿಾ... ನಮ್ಮ ತಾಯಿ ಖಾಯಿಲೆ ಬಿದ್ದಾಗ ಜೈಲಿಂದ ತಪ್ಪಿಸಿಕೊಳ್ಳೋಕೆ ಅವಕಾಶ ಕೊಟ್ಟ ದೇರಣ್ಣೋರಿಗೆ ಈಗ ನಾನು ಸಿಕ್ಕಿಬೀಳದಿದ್ರೆ ಆಯ್ತೆದಾ... ನಡೀರಮ್ಮಾ ಊರಿಗೆ ಮಗೀನ್ನ ಕರ್ಕೊಂಡು ಸ್ವಾಮಿಗಳನ್ನ ಸಬ್ಬಿನಿಸ್ಪೆಕ್ಟ್ರ ಮಾಡೀವಾ" ಎಂದ ಅವನೇ ಕರ್ಕೊಂಡು ಬಂದ."

—ಎಂದಾಗ ನಾನು ಅವಕ್ಕಾದೆ. ಈಗ ಬಂದ ಭೀಮ ಪರಮ ಚೋರಾಗ್ರೇಸರ ಕನ್ನೋಜಿಯೇ ಎಂದು ನಾನು ಶರೀರಾದ್ಯಂತ ಬೆವರಿದೆ. ಆ ಕನ್ನೋಜಿಯನ್ನು ಕಂಡೇ ದಫೇದಾರರು ಮೂರ್ಛೆಹೋದದ್ದು. ನಡುಗಿದ್ದು—.

ಕನ್ನೋಜಿ ಹೇಗೆ ಇವರನ್ನ ಸಬ್ಬಿನಿಸ್ಪೆಕ್ಟರ್ ಮಾಡ್ತಾನೆ?" ನನ್ನ ಪ್ರಶ್ನೆ.

"ಇವರ ಕೈಲಿ ಬೇಡಿ ಹಾಕಿಸ್ಕೊಂಡು ಅವರ ಜೊತೆ ಸೂಪ್ರೆಂಟರ ಮುಂದೆ ಹೋಗ್ತಾನೆ. ಇಡೀ ನಾಡೇ ಗುಡುಗಿದ ಕನ್ನೋಜಿಯನ್ನು ಹಿಡಿದ ಶೂರರೂಂತ ಸಬ್ಬಿನಿಸ್ಪೆಕ್ಟರನ್ನಾಗಿ ಮಾಡೇಮಾಡ್ತಾರೆ...."

"ಹೌದೆ ದಫೇದಾರ್ರೇ"

"ಹೂಂ" ಎಂದು ಭಂಡರಂತೆ ತಲೆಹಾಕಿದರು. ಕನ್ನೋಜಿ ಹೊರಗಿನಿಂದ ದಫೇದಾರರ ಕೋಟಿನಿಂದ ಬೇಡಿ ತಂದು ಕದ್ದು ಮುಂದೆ ಹಿಡಿದ. ದಫೇದಾರರು ನಡುಗುವ ಕೈಯ್ಯಲ್ಲಿ ತೊಡಿಸಿದರು. ಸರಪಳಿ ಬೆಲ್ಟಿಗೆ ಬಿಗಿದು ಸಾವಂತ್ರಿಯತ್ತ ಕಣ್ಣುಹಾಯಿಸಿ, ನಸುನಕ್ಕು ಠಾಣೆಗೆ ಠೀವಿಯಿಂದ ಕರೆದೊಯ್ದರು ಸಂಸ್ಕಾರ ಮತ್ತೆ ಕುದುರಿದ ಕುದುರೆಯಂತೆ.

"ಸಾವಂತ್ರಮ್ಮನೋರೇ ಈ ಕನ್ನೋಜಿ ತಾನೇ ಸಿಕ್ಕಿಬಿದ್ದನಲ್ಲಾ ಅವನಿಗೇನು ಹುಚ್ಚೆ? ಬೆಪ್ಪೇ? ಶಿವಲೀಲೆಯೆ?"

"ಅವನಿಗೇನು—ನಾಳೆಯೇ ಮತ್ತೆ ತಪ್ಪಿಸಿಕೊಳ್ಳುತ್ತಾನೆ....ನಮ್ಮವರ ಸಬ್ಇನ್ಸ್‌ಪೆಕ್ಟರಿಗಾಗಿ ಅವ ಸಿಕ್ಕಿದ್ದು."

—ಎಂದು ಗುಲಾಬಿಯಂತೆ ನಕ್ಕರು. ನಾನು ಈ ದಂಪತಿಗಳ ಪ್ರೇಮ ಕಂಡು ಆನಂದಬಾಷ್ಪ ಸುರಿಸಿ ಮನೆಗೆ ಹೋದೆ.

—[illegible]—




ನಾಲ್ಕು ತೋಳುಗಳ ನವ ಮೈಸೂರಿನ ರಾಜ್ಯಶ್ರೀ

# ಅನುಭವದಿಂದ ಬಂದ ಜ್ಞಾನ

---

ಶ್ರೀಗಂಧದ ಮರಗಳನ್ನು ಸಮೃದ್ಧವಾಗಿ ಬೆಳೆಸುವುದರ ರಹಸ್ಯವು ನೂರಾರು ವರ್ಷಗಳ ಅನುಭವವಾದ ಮೇಲೂ ಕೂಡಾ ಇನ್ನೂ ಮೈಸೂರು ಸೀಮೆಯೊಂದರ ವಶದಲ್ಲಿಯೇ ಇರುವ ಸ್ವತ್ತಾಗಿದೆ. ಮೈಸೂರು ಸರಕಾರದ ಕಾರ್ಖಾನೆಗಳಲ್ಲಿ ಬಟ್ಟಿಯಿಳಿಸಿದ ಅತ್ಯಂತ ಮನೋಹರವಾದ ಪರಿಮಳವುಳ್ಳ ಶ್ರೀಗಂಧದ ಎಣ್ಣೆಯೇ ಪ್ರಪಂಚದಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದದ್ದು. ಈ ಎಣ್ಣೆಯು ಸರ್ವ ಸಮರ್ಪಕವಾದ ಸ್ಥಳ ಸನ್ನಿವೇಶದಲ್ಲಿ ಬೆಳೆದು ಕಡಿದು ಕೊಡಿಟ್ಟ ಶ್ರೀಗಂಧದ ಮರದಿಂದ ತಯಾರಾದದ್ದು. ಅದರ ಸುವಾಸನೆಯು ಮರದಲ್ಲಿ ಸಾಕ್ಷಾತ್ತಾಗಿರುವ ಎಣ್ಣೆಯದು ಹೇಗೆಯೋ ಹಾಗೆಯೇ ತುಂಬಿಕೊಂಡು ಸ್ವಲ್ಪವೂ ಕುಂದದೆ ಇರುತ್ತದೆ. ಲೋಕದಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದ ಸಾಬೂನುಗಳ ಮತ್ತು ಪರಿಮಳ ದ್ರವ್ಯಗಳ ತಯಾರಿಕೆಯಲ್ಲಿ ಈ ಸುವಾಸನೆ ಉಪಯುಕ್ತವಾಗುತ್ತದೆ.



## ಮೈಸೂರು ಶ್ರೀಗಂಧದ ತೈಲ



**ಗವರ್ನಮೆಂಟ್ ಸ್ಯಾಂಡಲ್‌ಉಡ್ ಆಯಿಲ್ ಫ್ಯಾಕ್ಟರಿ,**

**ಮೈ ಸೂ ರು.**

Koravanji, January 1957



VITOFERRIN

TRADE MARK

MYSORE INDUSTRIAL & TESTING LABORATORY LTD MALLESWARAM BANGALORE

# ವೈಟೋಫೆರಿನ್

## (ಆಧುನಿಕ ಶಕ್ತಿವರ್ಧಕ ಟಾನಿಕ್)

ಇದರಲ್ಲಿ "ಎ" "ಬಿ" ಮತ್ತು "ಡಿ" ಎಂಬ ವೈಟಮಿನ್ನುಗಳೂ, ಐರನ್, ಕ್ಯಾಲ್ಸಿಯಂ ಮುಂತಾದ ಲೋಹ ವಿಶೇಷಗಳೂ, ಶುದ್ಧಗೊಳಿಸಿದ ತಾಮ್ರವೂ, ಮತ್ತು ಮಾಲ್ಟ್‌ಸಾರ, ಜೇನುತುಪ್ಪಗಳನ್ನು ಸೇರಿಸಿ ತಯಾರಿಸಿದ ಒಂದು ಅಮೃತಪಾನ. ಇವರಲ್ಲಿ ದೇಹಶಕ್ತಿಗೆ ಬೇಕಾದ ಸಕಲ ಔಷಧಗಳ ಸಮೂಹವೂ ಇದೆ. ಖಾಯಿಲೆಯಿಂದ ಎದ್ದವರಿಗೂ, ಬಸುರಿ ಬಾಣಂತಿಯರ ದೇಹದಾರ್ಢ್ಯಕ್ಕೂ ಇದು ಅತ್ಯುತ್ತಮವಾದ ಔಷಧ. ಸೇವಿಸಲು ಬಹಳ ರುಚಿಯಾಗಿಯೂ ಮತ್ತು ಮಧುರವಾಗಿಯೂ ಇದೆ.

★ ★

ತಯಾರಕರು :

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್**
**ಲ್ಯಾಬೋರಟರಿ ಲಿಮಿಟೆಡ್,**

ಮಲ್ಲೇಶ್ವರಂ - - - ಬೆಂಗಳೂರು 3